ಕರ್ನಾಟಕ ಶಿಕ್ಷಣ ಗ್ರಂಥಮಾಲೆ

ಜಗನ್ನಾಥಪಂಡಿತ ವಿರಚಿತ

# ಗಂಗಾಲಹರೀ.

(ಅನ್ವಯ ಅರ್ಥ ಸಹಿತ)


ಲೇಖಕ:— ಎಸ್. ಎ. ಕಲಕರ್ಣಿ

ಆಸಿ. ಮಾಸ್ತರ ಕನ್ನಡಶಾಳಾ ಗಜೇಂದ್ರಗಡ.



ಜುಲೈ ೧೯೩೧.






ಬೆಲೆ ೮ ಆಣೆ.


ಶ್ರೀ ಶಂಕರ ಕರ್ನಾಟಕ ಪುಸ್ತಕ ಭಂಡಾರ.

# ಲೇಖಕನ ಎರಡು ಮಾತುಗಳು.



ಮೂಲಸಂಸ್ಕೃತಕಾವ್ಯವನ್ನು, ಮರಾಠಿಯಲ್ಲಿಯ ವಾಮನಪಂಡಿತರಿಂದ ರಚಿಸಲ್ಪಟ್ಟ ಗಂಗಾಲಹರಿಯನ್ನು, ಮರಾಠೀಭಾಷೆಯಲ್ಲಿಯ ಒಂದೆರಡು ಅರ್ಥದ ಪುಸ್ತಕಗಳನ್ನು ಆಧಾರವಾಗಿಟ್ಟುಕೊಂಡು ನಾನಿದನ್ನು ಬರೆದಿದ್ದೇನೆ. ಸಂಸ್ಕೃತಾಭ್ಯಾಸಿಗಳಿಗೆ ಉಪಯುಕ್ತವಾಗಬೇಕೆಂದು ಇದರಲ್ಲಿ ಅನ್ವಯುವೂ, ಸುಲಭವಾದ ಭಾವಾರ್ಥವೂ ಹೇಳಿಲ್ಪಟ್ಟದೆ. ಈ ತರದ ಪುಸ್ತಕಗಳನ್ನು ಬರೆಯುುವದರಲ್ಲಿ ಇದು ನನ್ನ ಮೊದಲನೆಯ ಪ್ರಯತ್ನವಾದುದರಿಂದ ದೋಷಗಳುಳಿದಿರುವ ಸಂಭವವುಂಟು. ಸಹೃದಯರಾದ ವಾಚಕರು ತಪ್ಪುಗಳನ್ನು ತೋರಿಸಿಕೊಟ್ಟರೆ, ನಾನವುಗಳನ್ನು ಆನಂದದಿಂದ ಸ್ವೀಕರಿಸುವೆನು.

"ಕರ್ನಾಟಕ ಶಿಕ್ಷಣ"ದ ಸಂಪಾದಕರೂ ನನ್ನ ಮಿತ್ರರೂ ಆದ ಜೇ. ಏ. ಬಳವಂತರಾಯರವರು ಈ ಪುಸ್ತಕವನ್ನು ಪ್ರಸಿದ್ಧಿಸಿದ ಶ್ರೇಯವನ್ನು ಹೊಂದಿದ್ದಾರೆ. ಇದಕ್ಕಾಗಿ ನಾನು ಇವರ ವಿಷಯದಲ್ಲಿ ತುಂಬಾ ಕೃತಜ್ಞನಾಗಿದ್ದೇನೆ-

ಗಜೇಂದ್ರಗಡ 
೨೪-೪-೧೯೨೧

ಸಾಹಿತ್ಯಸೇವಕ
ಎಸ್. ಎ. ಕುಲಕರಣಿ



---

## ಅರ್ಪಣ ಪತ್ರಿಕೆ.

ಕನ್ನಡ ಭಾಷೆಯ ಸೇವೆಯನ್ನು ಕೈಗೊಂಡು ವ್ಯಾಪಕ
ದೃಷ್ಟಿಯಿಂದ ಕೆಲಸ ಮಾಡುತ್ತಿರುವ
**ಬಿ ವೆಂಕಟ ನಾರಾಯಣಪ್ಪನವರು ಎಮ್. ಎ. ಬೆಂಗಳೂರ**
ಈ ಮಹನಿಯರಿಗೆ ಲೇಖಕನು ಈ ಪುಸ್ತಕವನ್ನು
ಪ್ರೇಮಪುರಸ್ಸರವಾಗಿ ಅರ್ಪಿಸಿದ್ದಾನೆ-

# ಶುದ್ಧೀ ಪತ್ರಿಕೆ.

| ಪುಟ | ಸಾಲು | ಅಶುದ್ಧ | ಶುದ್ಧ |
|---|---|---|---|
| ೨ | ೧ | ಪ್ರಸಂಗ | ಈ ಪ್ರಸಂಗ |
| ೩ | ೨೧ | ಚಾರುಚೀ | ಚಾರುಚೀ |
| ೫ | ೧೭ | ನಿಕಟೀ | ನಿಕಟೀ |
| ೬ | ೨೬ | ಸರಣಮ್ | ಸರಣೀಮ್ |
| " | ೨೭ | ಅಯು | ಅಪಿ |
| ೭ | ೮ | ವೃತ | ವೃಕ್ಷ |
| " | ೧೧ | ಉಪ | ಉದ |
| " | ೧೪ | ಭಂಗಾಹು | ಭಂಗಾಯು |
| " | ೧೯ | ಕಂಪಿಡಿ | ಕಂಪಿ |
| " | ೨೬ | ಸರ್ವೇದಯಾ | ಸರ್ವೇ |
| " | ೨೭ | ರೋದ? | ರೋದಿಮಿ? |
| ೮ | ೨೫,೨೮ | ಪರಿಸಹತಿ | ಪರಿಹಸತಿ |
| ೯ | ೧೮ | ಪ್ರವೇಶಿಸುತ್ತಾರೆ | ಪ್ರವೇಶಿಸುತ್ತವೆ |
| " | ೨೭ | ಶಾಂತ | ಶಾಂತತೆ |
| ೧೩ | ೭ | ಜಯುತಾಂ | ಜನಯುತಾಂ |
| ೧೪ | ೨೭ | ನರಾಸೂರೀ | ನರಾಸ್ದೂರೀ |
| ೧೫ | ೧೫ | ಅಥ ಶ್ರೀಯಾಂ | ಅಥ ಶ್ರಿಯಾಂ |
| " | ೨೭ | ವಂತುಃ | ಮಂತು: |
| ೧೮ | ೨೪ | ಯುವಧಿ | ಯುದವಧಿ |
| ೧೯ | ೩೦ | ರ್ಲರತಿ | ಉರ್ಲರತಿ |
| ೨೦ | ೨೨ | ತಪ | ತವ |
| ೨೪ | ೨೭ | ವ್ರಾತ್ಯಧವು | ವ್ರಾತ್ಯಾಧವು |
| ೨೬ | ೪ | ನಯೆ | ದಯು |
| " | ೭,೧೧ | ಸರಣಾ | ಸರಣೌ |
| ೩೦ | ೨೭ | ಮಿಲಿತ | ಮೀಲಿತ |
| ೩೧ | ೧೦ | ವಾಗಿದ್ದೆಂದು | ವಾಗಿದೆಂದು |
| " | ೨೭ | ಗಜ, ಚರ್ಮ | ಗಜಚರ್ಮ |

॥ ಶ್ರೀ ॥

# ಅಥ ಸಾರ್ಥಗಂಗಾಲಹರೀ ಪ್ರಾರಂಭಃ

## ಶ್ರೀ ಗಣೇಶಾಯ ನಮಃ

ಭಾರತತರ ಭಾಗ್ಯ ಭರದಿಂ | ಭಾರತದೊಳ್ಪರಿದು ಭಾರತೀಯರ್ಗೆಂದುಂ ||
ಸಾರತರ ಸಕಲ ಸಂಪದ | ಬೀರಿದ ಗಂಗೆಯ ಧರಂ ಪೊರೆಗೆ ನಿಚ್ಚೆಮ್ಮಂ ||೧||

**ಕಾವ್ಯಮುಖಃ**— ನಮ್ಮ ಪ್ರಾಚೀನ ಆರ್ಯರ ಸಂಸ್ಕೃತವಾಙ್ಮಯವು ಬಹು ಪ್ರಸಿಧ್ಧವಾಗಿದೆ ಹೀಗಾಗುವದಕ್ಕೆ ಸಂಸ್ಕೃತ ಭಾಷೆಯಲ್ಲಿರುವ ಪಾರಮಾರ್ಥಿಕ ಗ್ರಂಥಗಳ ಬಾಹುಲ್ಯವೂ, ಇಹಸಂಸಾರದ ಸುಖಾಭಿವೃದ್ಧಿಗೆ ಕಾರಣೀ ಭೂತವಾದ ಕಾವ್ಯ-ನಾಟಕ ಗ್ರಂಥಗಳ ವಿಪುಲತೆಯೂ ಕಾರಣೀಭೂತವಾಗಿದೆ. ತಮ್ಮ ವಾಙ್ಮಯಾಭಿವೃದ್ಧಿಗಾಗಿ ನಮ್ಮ ಪ್ರಾಚೀನರು ಬಹು ಶ್ರಮಬಟ್ಟು ಅನೇಕ ಉತ್ತಮೋತ್ತಮ ಗ್ರಂಥಗಳನ್ನು ರಚಿಸಿದ್ದಾರೆ. ಅದರಿಂದವರು ವಿಶ್ವ ವಿಶ್ರುತರಾಗಿದ್ದಾರೆ. ಈ ಮೇರೆಗೆ ಕೀರ್ತಿಶಾಲಿಗಳಾದ ಸಂಸ್ಕೃತ ಗ್ರಂಥಕಾರರಲ್ಲಿ ಜಗನ್ನಾಥ ಪಂಡಿತನೊಬ್ಬನಾಗಿದ್ದಾನೆ. ಇವನು ಸಂಸ್ಕೃತದಲ್ಲಿ ನಾಲ್ಕೈದು ಶ್ರೇಷ್ಠಗ್ರಂಥಗಳನ್ನು ಬರೆದಿದ್ದಾನೆ. ಇವುಗಳಲ್ಲಿ ಗಂಗಾಲಹರಿಯು ಒಂದಾಗಿದೆ. ಈ ಕಾವ್ಯವು ಸಣ್ಣದಿದ್ದರೂ, ಪ್ರಸಿಧ್ಧವಾದದ್ದಾಗಿದೆ. ಯಾಕಂದರೆ ಇದು ಬಹು ಮನೋಹರವಾಗಿದೆ. ಜಗನ್ನಾಥ ಪಂಡಿತನು ಈ ಕಾವ್ಯವನ್ನು ಏತಕ್ಕಾಗಿ ರಚಿಸಿದನೆಂಬದು ಇವನ ಚರಿತ್ರೆಯಿಂದ ಗೊತ್ತಾಗುವಂತಿರುವದರಿಂದ, ನಾವು ಇವನ ಸಂಕ್ಷಿಪ್ತ ಚರಿತ್ರೆಯನ್ನು ಕೆಳಗೆ ಕೊಟ್ಟದ್ದೇವೆ.

ಜಗನ್ನಾಥ ಪಂಡಿತನ ಮೂಲವಾಸಸ್ಥಳವು ತೈಲಂಗಣದೇಶದೊಳಗಿನ ಮುಂಗಡಾ ಎಂಬ ಪಟ್ಟಣವು. ಇವನು ವೇಗಿನಾಡಕುಲದಲ್ಲಿಯ ಪೇರಮ (ಪೇರು) ಭಟ್ಟನೆಂಬವನ ಮಗನು. ಇವನು ಹನ್ನೆರಡು ವರುಷದವನಾಗುವವರೆಗೆ ಸಂಸ್ಕೃತಭಾಷೆಯನ್ನೆಷ್ಟು ಮಾತ್ರವೂ ಅರಿತಿರಲಿಲ್ಲ; ಆದರೆ ಮುಂದೆ ಇವನಿಗೆ ಸಂಸ್ಕೃತಭಾಷೆಯನ್ನಭ್ಯಾಸಿಸುವ ಪ್ರಬಲವಾದ ಇಚ್ಛೆಯುಂಟಾಯಿತು. ಅದರಿಂದಿವನು ತನ್ನ ಅಜ್ಜನ ಮನೆಯಲ್ಲಿದ್ದುಕೊಂಡು, ಆಸ್ಥೆಯಿಂದ ಗೀರ್ವಾಣಭಾಷಯನ್ನಭ್ಯಾಸಿಸಿದನು. ತುಸು ದಿವಸಗಳಲ್ಲಿ ನ್ಯಾಯ, ಅಲಂಕಾರ, ಮೀಮಾಂಸೆ, ವ್ಯಾಕರಣ ಮೊದಲಾದ ಶಾಸ್ತ್ರಗಳನ್ನಭ್ಯಾಸಿಸಿ, ಪಂಡಿತನಾದನು. ಉತ್ತಮ ಕವಿಯೂ ಆಗಿದ್ದನು ಮುಂದೆ ಇವನು ತನ್ನ ವಿದ್ವತ್ತಿಗೆಯನ್ನು ತೋರ್ಪಡಿಸಿ, ಬಹು ಮಾನಪಡೆಯಬೇಕೆಂಬ ಲವಲವಿಕೆಯಿಂದ ಕರ್ನಾಟಕದ ಅರಸನ ದರ್ಶನಕ್ಕಾಗಿ ಹೋದನು. ಆದರೆ ಅಲ್ಲಿ ಇವನಿಗೆ ಯೋಗ್ಯಸನ್ಮಾನವು ದೊರೆಯಲಿಲ್ಲ. ಮೇಲಾಗಿ ಅಪಮಾನ

ಕ್ಕೊಳಗಾದನು. ಅದರಿಂದ ಇವನು ಪ್ರಸಂಗವನ್ನು ಕುರಿತು ಕೆಲವು ಶ್ಲೋಕಗಳನ್ನು ರಚಿಸಿದನು. ಇದರಿಂದಾದರೂ ಕರ್ನಾಟಕದ ರಾಜನು ಸಂತುಷ್ಟನಾಗಿ ಬಹು ಮಾನಮಾಡಬಹುದೆಂದು ಇವನು ಯೋಚಿಸಿದ್ದನು; ಆದರೆ ಇವನ ಆಕಾಂಕ್ಷೆಯಂತೆ ಯೋಗ್ಯ ಫಲವು ದೊರೆಯಲಿಲ್ಲ- ಇವನ ಪ್ರಯತ್ನದ ಕಡೆಗೆ ಯಾರೂ ಲಕ್ಷಗೊಡಲಿಲ್ಲ. ಕಾರಣ ಇವನು ನಿರಾಶನಾಗಿ ಅಲ್ಲಿಂದ ಹೊರಟು ಜಯಪುರಕ್ಕೆ ಬಂದನು. ಇವನು ಇಲ್ಲಿ ಬಹಳದಿವಸಗಳವರೆಗಿದ್ದು, ಅನೇಕ ಶಾಸ್ತ್ರಗಳಲ್ಲಿ ವಾದ ಮಾಡಿ, ಪಂಡಿತರನ್ನು ಸೋಲಿಸಿದನು. ಅದರಿಂದ ಇವನು ಪ್ರಸಿದ್ಧಿಗೆ ಬಂದನು. ಇವನು ಜಯಪುರದಲ್ಲಿ ಒಂದು ಶಾಲೆಯನ್ನು ಸ್ಥಾಪಿಸಿ, ಶಿಷ್ಯರಿಗೆ ವಿದ್ಯಾದಾನವನ್ನು ಮಾಡಿದನು.

ಈ ಸಮಯದಲ್ಲಿ ಮೊಗಲಬಾದಶಹರಲ್ಲಿ ಶ್ರೇಷ್ಠತಮನಾದ ಅಕಬರನು ದಿಲ್ಲಿಯ ಬಾದಶಹನಾಗಿದ್ದನು. ಇವನ ಆಶ್ರಯದಲ್ಲಿ ವಿದ್ವಾಂಸನಾದೊಬ್ಬ ಕಾಜಿಯು ಇದ್ದನು. ಇವನು ತನ್ನಲ್ಲಿರುವ ವಿದ್ಯೆಯ ಬಲದಿಂದ “ ಯವನ ಧರ್ಮವೊಂದು ಮಾತ್ರ ನಿಜವಾದದ್ದು; ಉಳಿದ ಧರ್ಮಗಳು ನಿಜವಾದವುಗಳಲ್ಲ. ” ಎಂದು ಪ್ರತಿಪಾದಿಸುತಲಿದ್ದನು. ಮತ್ತು ಇವನು ತನ್ನ ಈ ಮತವನ್ನು ಜನರಲ್ಲಿ ಪ್ರಸಾರಗೊಳಿಸುವದಕ್ಕಾಗಿ ನಾನಾದೇಶಗಳಲ್ಲಿ ಅಡ್ಡಾಡಿ, ಪಂಡಿತರನ್ನು ಸೋಲಿಸಿ, ತನ್ನ ಮತವು ಶ್ರೇಷ್ಠವೆಂದು ಸಾರಿದನು. ಇದು ಜಗನ್ನಾಥ ಪಂಡಿತನಿಗೆ ತಿಳಿಯಿತು. ಜಗನ್ನಾಥ ಪಂಡಿತನು ಕಾಜಿಯನ್ನು ಸೋಲಿಸುವ ಮನಸ್ಸು ಮಾಡಿದನು. ಇವನು ಉಳಿದ ಬ್ರಾಹ್ಮಣ ಪಂಡಿತರ ಬಳಿಯಲ್ಲಿ ಒಂದು ವರುಷದ ಮುದ್ದತು ತೆಗೆದುಕೊಂಡು, ಇಷ್ಟು ಅವಧಿಯಲ್ಲಿ ಆ ಕಾಜಿಯನ್ನು ಸೋಲಿಸಿ ಬರುವೆನೆಂದು ಹೇಳಿದನು. ತರುವಾಯ ಇವನು ಅದೇ ಕಾಜಿಯ ಬಳಿಗೆ ಹೋಗಿ, ಅವನ ಶಿಷ್ಯತ್ವವನ್ನು ವಹಿಸಿ, ಯವನ ಧರ್ಮದ ಅಭ್ಯಾಸ ಮಾಡಿದನು, ಮಹಮ್ಮದೀಯ ಧರ್ಮದ ಯಾವತ್ತು ಗ್ರಂಥಗಳನ್ನು ನೋಡಿಕೊಂಡು, ಈ ಧರ್ಮದ ಮಾರ್ಮಿಕ ಜ್ಞಾನವನ್ನು ಸಂಪಾದಿಸಿದನು. ತರುವಾಯ ಇವನು ಆ ಕಾಜಿಯನ್ನು— ತನ್ನ ಗುರುವನ್ನು ವಾದದಲ್ಲಿ ಸೋಲಿಸಿದನು; ಮತ್ತು “ ಪ್ರತಿಯೊಬ್ಬರು ತಮ್ಮ ತಮ್ಮ ಧರ್ಮವನ್ನೇ ಪಾಲಿಸಬೇಕು ಯವನ ಧರ್ಮವನ್ನು ಯವನರಷ್ಟೇ ಪಾಲಿಸಬೇಕು; ಇತರರು ಈ ಧರ್ಮವನ್ನಾಚರಿಸಲು ಅಧಿಕಾರಿಗಳಲ್ಲ. ” ಎಂದು ಸಿದ್ಧ ಮಾಡಿಕೊಟ್ಟನು. ಇದರಿಂದ ಬಾದಶಹನು ಜಗನ್ನಾಥ ಪಂಡಿತನ ಮೇಲೆ ಸಂತುಷ್ಟನಾದನು. ಅವನು ಜಗನ್ನಾಥನ ಅಗಾಧವಾದ ಪಾಂಡಿತ್ಯಕ್ಕೆ ಮೆಚ್ಚಿ, ಪಂಡಿತನನ್ನು ತನ್ನ ಬಳಿಯಲ್ಲಿರಿಸಿಕೊಂಡನು. ಜಗನ್ನಾಥ ಪಂಡಿತನು ಫಾರಸೀ ಭಾಷೆಯನ್ನಭ್ಯಾಸಿಸಿದ ಬಳಿಕ, ಕೆಲವು ಸಂಸ್ಕೃತ ಶ್ಲೋಕಗಳನ್ನು ಫಾರಸಿ ಮತ್ತು ಶಾಯುರೀ ಭಾಷೆಗಳ ಮಿಶ್ರಭಾಷೆಯಲ್ಲಿ ರಚಿಸಿದನು. ಬಾದಶಹನ ದರಬಾರದಲ್ಲಿ ಇವನಂಥ ಪಂಡಿತರು ಬೇರೆ ಯಾರೂ ಇರಲಿಲ್ಲ. ಅದರಿಂದ ಇವನ ವರ್ಚಸ್ಸು ಬಹಳವಾಗಿ ಬಳೆಯಿತು

ಜಗನ್ನಾಥ ಪಂಡಿತನು ನೋಡುವದಕ್ಕೆ ಬಹು ಸುಂದರನಾಗಿದ್ದನು. ಇವನ ಅಸಾಧಾರಣವಾದ ರೂಪವೂ, ವಾಕ್ಪಟುತೆಯೂ ಪ್ರೇಕ್ಷಕರನ್ನು ಕೂಡಲೇ ಮೋಹ ಗೊಳಿಸುತ್ತಿದ್ದವು. ಬಾದಶಹನಿಗೆ ರೂಪವತಿಯೂ ಸುಗುಣವತಿಯೂ ಆದ ಲವಂಗಿಯೆಂಬ ಮಗಳಿದ್ದಳು. ಇವಳಿಗೆ ಜಗನ್ನಾಥ ಪಂಡಿತನ ರೂಪವೂ, ಪಾಂಡಿತ್ಯವೂ ಜನರ ಮುಖದಿಂದ ತಿಳಿದು ಬಂದಿತು. ಆದರಿಂದವಳು ಜಗನ್ನಾಥ ಪಂಡಿತನನ್ನು ನೋಡುವದಕ್ಕೆ ಇಚ್ಛಿಸಿದಳು; ನೋಡಿ ಮೋಹಿತಳಾಗಿ ಹೋದಳು. ಕಾರಣ ಇವಳು ಪಡದೆಯ ಮರೆಯಲ್ಲಿ ಕುಳಿತು ಮೇಲಿಂದ ಮೇಲೆ ಪಂಡಿತನ ರೂಪವನ್ನು ನೋಡತೊಡಗಿದಳು; ಬಾದಶಹ- ಪಂಡಿತರಲ್ಲಿ ನಡೆಯುತ್ತಿರುವ ಮಾತು- ಕಥೆಗಳನ್ನು ಚಿತ್ತಗೊಟ್ಟು ಕೇಳತೊಡಗಿದಳು. ಇದರಿಂದವಳ ಪ್ರಣಯವು ಬಳೆಯತೊಡಗಿತು. ಇವಳು ಹದಿನಾರುವರುಷದ ಯುವತಿಯಾಗಿದ್ದು, ಇನ್ನೂ ಕುಮಾರಿಕೆಯಾಗಿದ್ದಳು. ಆದರಿಂದವಳು ತನ್ನ ಮನೋಭಿಲಾಷೆಯನ್ನು ತಡೆಯಲಾರದವಳಾಗಿ, ಪಂಡಿತನನ್ನು ಲಗ್ನವಾಗುವದನ್ನು ನಿಶ್ಚಯಿಸಿ, ಈ ಸಂಗತಿಯನ್ನು ತನ್ನ ತಾಯಿಗೆ ತಿಳುಹಿಸಿದಳು.

ಒಂದುದಿವಸಬಾದಶಹನೂ ಪಂಡಿತನೂ ಚದುರಂಗವನ್ನಾಡುತ್ತ ಕುಳಿತಿದ್ದರು. ಈ ಸಮಯದಲ್ಲಿ ಬಾದಶಹನಿಗೆ ನೀರಡಿಕೆಯಾಯಿತು. ಆಗವನು ನೀರುತೆಗೆದುಕೊಂಡು ಬರಲಿಕ್ಕೆ ಆಜ್ಞಾಪಿಸಿದನು. ಲವಂಗಿಯು ಸುವರ್ಣ ಕಲಶದಲ್ಲಿ ನೀರನ್ನು ತುಂಬಿಕೊಂಡು, ಅದನ್ನು ತಲೆಯಮೇಲಿಟ್ಟುಕೊಂಡು ಬಾದಶಹನ ಬಳಿಗೆ ಬಂದಳು. ಬಾದಶಹನು ಜಲಪಾನಮಾಡಿ, ಸಂತುಷ್ಟನಾದನು. ತರುವಾಯ ಲವಂಗಿಯು ಪುನಃ ಕೊಡವನ್ನು ತಲೆಯಮೇಲೆ ಹೊತ್ತುಕೊಂಡು ಹೋಗತೊಡಗಿದಳು. ಬಾದಶಹನು ಕವಿಯನ್ನುಕುರಿತು, ತನ್ನಮಗಳ ವರ್ಣನೆಮಾಡಲು ಹೇಳಿದನು. ಜಗನ್ನಾಥಪಂಡಿತನು ಕೂಡಲೇ ಪದ್ಯವನ್ನು ರಚಿಸಿ, ಬಾದಶಹನಿಗೆ ಹೇಳಿದನು:—

ಇಯಂ ಸುಸ್ತನೀ ಮಸ್ತಕನ್ಯಸ್ತಕುಂಭಾ ಕುಸುಂಭಾರುಣಂ ಚಾರುಚೀಲಂ ದಧಾನಾ ||
ಸಮಸ್ತಸ್ಯ ಲೋಕಸ್ಯ ಚೇತಃ ಪ್ರವೃತ್ತಿಂ ಗೃಹೀತ್ವಾ ಘಟೇಸ್ಥಾಪ್ಯಯಾತೀವಭಾತಿ || ೧ ||

ಜಗನ್ನಾಥ ಪಂಡಿತನಲ್ಲಿರುವ ತಾತ್ಕಾಲಿಕ ಕವಿತಾರಚನೆಯ ಸಾಮರ್ಥ್ಯವನ್ನು ನೋಡಿ, ಬಾದಶಹನು ಆನಂದಿತನಾದನು. ಮೊದಲೇ ಸಂತುಷ್ಟಚಿತ್ತನಾಗಿದ್ದ ಅವನು, ಈ ಪದ್ಯವನ್ನು ಕೇಳಿ, ಬಹಳವಾಗಿ ಪ್ರಸನ್ನ ನಾದನು. ಈ ಸಂತೋಷದಲ್ಲವನು ಪಂಡಿತನನ್ನು ಕುರಿತು—" ನಿನ್ನ ಮನೋಬಯಿಕೆಯನ್ನುಹೇಳು; ನೀನು ಬೇಡಿದ್ದನ್ನು ಕೊಡಲು ಸಿದ್ಧನಾಗಿರುವೆನು, " ಎಂದು ಹೇಳಿಬಿಟ್ಟನು.

ಪಂಡಿತನು ಬಹಳ ವಿಷಯಾಸಕ್ತನಾಗಿದ್ದನು; ಮೇಲಾಗಿ ರಾಜಕನ್ಯೆಯ ಅಪ್ರತಿಮರೂಪವು ಅವನ ಮನಸನ್ನಾಕರ್ಷಿಸಿತ್ತು. ಕಾರಣ ಅವನು ಬೇಡಿಕೊಂಡದ್ದು:-

ನಯಾಚೇ ಗಜಾಲಿಂ ನವಾ ವಾಜಿರಾಜಿಂ ನವಿತ್ತೇಷುಚಿತ್ತಂ ಮದೀಯಂ ಕದಾಚಿತ್ ||
ಇಯಂ ಸುಸ್ತನೀ ಮಸ್ತಕನ್ಯಸ್ತಕುಂಭಾ ಲವಂಗೀ ಕುರಂಗೀ ದೃಗಂಗೀಕರೋತು ॥ ೧ ॥
ಯುವನೀ ಸವನೀತಕೋಮಲಾಂಗೀ ಶಯನೀಯೇ ಯದಿ ಲಭ್ಯತೇ ಕದಾಚಿತ್ ॥
ಅವನೀತಲಮೇವ ಸಾಧುಮನ್ಯೇ ನವನೀ ಮಾಘವನೀ ವಿನೋದ ಹೇತುಃ ॥ ೨ ॥

(ನನಗೆ ನಿನ್ನ ಆನೆಗಳು ಬೇಕಾಗಿಲ್ಲ; ಕುದುರೆಗಳು ಬೇಕಾಗಿಲ್ಲ; ಧನವನ್ನು ಬೇಡಿಕೊಳ್ಳುವ ಇಚ್ಛೆಯು ನನಗಿಲ್ಲ; ಆದರೆ ತಲೆಯಮೇಲೆ ಕೊಡಹೊತ್ತುಕೊಂಡು ನಡೆದಿರುವ ನಿನ್ನ ಮಗಳಾದ ಈ ಹರಿಣಾಕ್ಷಿಯು ನನ್ನನ್ನು ಅಂಗೀಕರಿಸಿದರೆ ಸಾಕು. ಇಷ್ಟೇ ನನ್ನ ಬೇಡಿಕೆಯು. ನವನೀತದಂತೆ ಕೋಮಲಾಂಗಿಯಾದ ಇವಳು, ನನ್ನ ಪಾಣಿಗ್ರಹಣಮಾಡುವಳಾದರೆ, ಇಂದ್ರನ ನಂದನಕ್ಕಿಂತಲೂ ಈ ಭೂಲೋಕವೇ ಹೆಚ್ಚು ಸುಖಕಾರಕವೆಂದು ನಾನು ಭಾವಿಸುತ್ತೇನೆ).

ಪಂಡಿತನ ಈ ಬೇಡಿಕೆಯನ್ನು ಕೇಳಿ, ಬಾದಶಹನಿಗೆ ಅಸಮಾಧಾನವಾಯಿತು; ಯಾಕಂದರೆ ಹಿಂದುಸ್ತಾನದ ಸಾಮ್ರಾಟನಾದ ತಾನು ಇಂಥ ದರಿದ್ರ ಬ್ರಾಹ್ಮಣನೊಡನೆ ಶರೀರಸಂಬಂಧಬಳಿಸುವದು ಅವನ ಇಷ್ಟವಾಗಿರಲಿಲ್ಲ. ಅವನಂತು ವಚನಕೊಟ್ಟಿದ್ದನು. ಕಾರಣ ಪಂಡಿತನ ಬೇಡಿಕೆಯನ್ನು ಅಲ್ಲಗಳೆಯುವಂತೆಯೂ ಇರಲಿಲ್ಲ. ಆದುದರಿಂದವನು ಪಂಡಿತನನ್ನು ಕುರಿತು —“ನೀನು ನಮ್ಮೊಡನೆ ಊಟಮಾಡುವೆಯಾದರೆ ನಾನು ನನ್ನ ಮಗಳನ್ನು ನಿನಗೆ ಕೊಟ್ಟು ಲಗ್ನ ಮಾಡುವೆನು,” ಎಂದು ಹೇಳಿದನು. ತನ್ನ ಬ್ರಾಹ್ಮಣ್ಯವು ನಷ್ಟವಾದರೂ ಚಿಂತೆಯಿಲ್ಲ; ಬಾದಶಹನ ಸುಕುಮಾರಿಯಾದ ಲವಂಗಿಯು ದೊರೆತರೆ ಸಾಕೆಂದು ಪಂಡಿತನ ಉತ್ಕಟೇಚ್ಛೆಯಿದ್ದಿತು. ಆದರಿಂದವನು ಬಾದಶಹನ ಮಾತಿಗೆ ಸಂತೋಷದಿಂದ ಒಪ್ಪಿಕೊಂಡನು.

ಲವಂಗಿಯು ತನ್ನ ಇಚ್ಛೆಯನ್ನೂ ಮಾತೆಗೆ ತಿಳಿಸಿದಳೆಂದು, ನಾವುಹಿಂದೆಹೇಳಿದ್ದೇವೆ. ಆದರೆ ಈ ಸಂಬಂಧವು ರಾಣಿಗಾದರೂ ಹಿತಕಾರಕವಾಗಿ ಕಂಡುಬರಲಿಲ್ಲ. ನನ್ನಮಗಳು ದೃಢನಿಶ್ಚಯುದವಳಿರುವಳೆಂದೂ, ಇಚ್ಛೆಯು ಪೂರ್ಣವಾಗದಿದ್ದರೆ ಪ್ರಾಣಬಿಡುವಳೆಂದೂ ರಾಣಿಗೆಗೊತ್ತಿತ್ತು. ಅದರಿಂದವಳು ಸಮಯುವರಿತು ಬಾದಶಹನ

ಬಳಿಯಲ್ಲಿ ಈ ಪ್ರಸ್ತಾಪವೆತ್ತುವ ಯೋಚನೆಮಾಡಿಕೊಂಡು ಕುಳಿತಿದ್ದಳು. ಇಷ್ಟರಲ್ಲಿ ರಾಜನು ತಾನಾಗಿಯೇ ಈ ಸಂಗತಿಯನ್ನು ರಾಣಿಗೆ ತಿಳುಹಿಸಿದನು.

ಬಾದಶಹನು ಮಗಳ ವಿವಾಹವನ್ನು ಬಹು ವಿಜೃಂಭಣೆಯಿಂದ ಮಾಡಿದನು. ಹಿಂದೂಜನರು ಪಂಡಿತನಿಗೆ ಬಹಿಷ್ಕಾರಹಾಕಿದರು. ಆದರೂ ಪಂಡಿತನಿಗೆ ರಾಜಾಶ್ರಯವಿದ್ದದರಿಂದ ಸಂಸಾರ ಯಾತ್ರೆಯನ್ನು ಸುಖದಿಂದ ಸಾಗಿಸಲು ಅನುಕೂಲವಾಯಿತು.

ಪಂಡಿತನು ಒಮ್ಮೆ ಹೆಂಡತಿಯೊಡನೆ ಭಾಗೀರಥಿಯ ಧಡದಲ್ಲಿ ಮಲಗಿದ್ದನು. ಮಧ್ಯಾಹ್ನದ ಸಮಯವಾಗಿದ್ದರೂ ಹಾಗೇ ಬಿದ್ದುಕೊಂಡಿದ್ದನು. ಈ ಸಮಯದಲ್ಲಿ ಅಪ್ಪಯದೀಕ್ಷಿತರು ಈ ಮಾರ್ಗದಲ್ಲಿ ಹಾದು ಹೋಗುತಲಿದ್ದರು. ಅವರು "ಇಂಥ ಪ್ರಸಿದ್ಧಸ್ಥಳದಲ್ಲಿ ಯಾವ ಚಾಂಡಾಲನು ಯವನಿಯೊಡನೆ ಮಲಗಿರಬಹುದು?" ಎಂದು ಆಲೋಚಿಸಿ, ಪಂಡಿತನ ಬಳಿಯಲ್ಲಿ ಬಂದು ನೋಡಿದರು. ಪಂಡಿತನ ಕೂದಲುಗಳು ಬೆಳ್ಳಗಾಗಿ ಹೋಗಿದ್ದವು. ದೀಕ್ಷಿತರು ಇದನ್ನು ನೋಡಿ—"ಕಿಂ ನಿಃಶಂಕಂ ಶೇಷೇ ಶೇಷೇ ವಯಸಿತ್ವಮಾಗತೇ ಮೃತ್ಯೌ॥" (ನೀನು ವೃದ್ಧಾಪ್ಯಕಾಲದಲ್ಲಿ ಮೃತ್ಯುವು ಸನ್ನಿಹಿತವಾಗಿರುವಾಗ ಹೀಗೆ ನಿಃಶಂಕಮನಸ್ಸಿನಿಂದ ಹೇಗೆ ಮಲಗಿದ್ದಿಯಾದೀತು?) ಎಂಬ ಆರ್ಯಾರ್ಧವನ್ನು ಅಂದರು

ಪಂಡಿತನು ಎಚ್ಚತ್ತು ಮೋರೆಯಮೇಲಿನ ಮುಸುಕನ್ನು ತೆಗೆದನು. ದೀಕ್ಷಿತರು ಅವನನ್ನು ಕುರಿತು—"ಅಥವಾ ಸುಖಂ ಶಯೀಥಾ ನಿಕಟೇ ಜಾಗರ್ತಿ ಜಾಹ್ನವೀ ಭವತಃ॥ ೧॥" (ಪಂಡಿತರಾಯ, ಏನೂ ಅಡ್ಡಿಯಿಲ್ಲ. ಸ್ವಚ್ಛಂದದಿಂದ ಮಲಗಿಕೊಳ್ಳು; ಯಾಕಂದರೆ ನಿನಗೋಸ್ಕರ ಈ ಭಾಗೀರಥಿಯು ಸದಾ ಜಾಗೃತಳಾಗಿರುವಳು) ಎಂದು ಹೇಳಿದರು.

ಜಗನ್ನಾಥ ಪಂಡಿತನು ಕಾಶಿಯಲ್ಲಿರುವ ಬ್ರಾಹ್ಮಣರಿಗೆ ಪ್ರಾಯಶ್ಚಿತ್ತದಿಂದ ತನ್ನನ್ನು ಶುದ್ಧಮಾಡಬೇಕೆಂದು ಹೇಳಿಕೊಂಡನು. ಬ್ರಾಹ್ಮಣರು ನೀನೊಬ್ಬನೆ ಬರುವಿಯಾದರೆ, ನಿನ್ನನ್ನು ಶುದ್ಧಮಾಡುವೆವೆಂದು ಹೇಳಿದರು. ಪಂಡಿತನು ತನ್ನ ಹೆಂಡತಿಯೊಡನೆ ತನ್ನನ್ನು ಶುದ್ಧಮಾಡಬೇಕೆಂದು ಹಟ ಹಿಡಿದನು. ಬ್ರಾಹ್ಮಣರು ಈ ಮಾತಿಗೆ ಒಪ್ಪಲಿಲ್ಲ. ಅದರಿಂದ ಪಂಡಿತನು ಹಾಗೇ ಇರಬೇಕಾಯಿತು. ಈ ವೇಳೆಯಲ್ಲವನಿಗೆ ಸಂಪೂರ್ಣವಾಗಿ ಪಶ್ಚಾತ್ತಾಪವುಂಟಾಗಿದ್ದಿತು. ಆದರೂ ಈ ವರೆಗೆ ತನನ್ನು ನಂಬಿಕೊಂಡಿರುವ ಹೆಂಡತಿಯನ್ನು ಬಿಡಲು ಅವನು ಇಚ್ಛಿಸಲಿಲ್ಲ. ಶಕೆ೧೫೦೦ರಲ್ಲಿ ಪಂಡಿತನು ಹೆಂಡತಿಯೊಡನೆ ಗಂಗಾನದಿಯ ಘಾಟದಮೇಲೆ ಕುಳಿತುಕೊಂಡು ಭಾಗೀರಥಿಯ ಸ್ತೋತ್ರವನ್ನಾರಂಭಿಸಿದನು. ಇವನ ಪ್ರತಿಯೊಂದು ಶ್ಲೋಕಕ್ಕೆ ಗಂಗಾನದಿಯು ಒಂದೊಂದು ಪಾವಟಿಗೆಯಂತೆ ಮೇಲೇರಹತ್ತಿತು. ಹೀಗೆ ಪಂಡಿತ

ಸು ಅಂದ ಇತಿ ಶ್ಲೋಕಗಳಿಗೆ ಭಾಗೀರಥಿಯು ೫೨ ಪಾವಟಿಗೆಮೇಲೇರಿಬಂದಳು; ಪಂಡಿತನನ್ನುದ್ಧಾರಮಾಡಿದಳು. ಈ ನೋಟವನ್ನು ನೋಡುವದಕ್ಕಾಗಿ ಕಾಶಿಯೊಳಗಿನ ಬಹುಜನರು ಕೂಡಿದ್ದರು.

ಜಗನ್ನಾಥ ಪಂಡಿತನು ತನ್ನ ಉದ್ಧಾರಕ್ಕಾಗಿ ಗಂಗೆಯನ್ನು ಸ್ತುತಿಸಿದ ಪದ್ಯಗಳಸಮೂಹವು ಗಂಗಾಲಹರಿಯೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಇದೊಂದು ಭಕ್ತಿಸರಪೂರ್ಣವಾದ ಕಾವ್ಯವು. ಇದರಲ್ಲಿ ಪಂಡಿತನು ಪಾಪನಾಶಳೂ, ಸಂಸಾರಬಂಧನದಿಂದ ಪಾರುಮಾಡುವವಳೂ, ಭಾಗೀರಥಿಯೇ ಎಂದು ತಿಳಿದು, ಅವಳನ್ನು ಅನನ್ಯಭಾವದಿಂದ ಮರೆಹೊಕ್ಕ ಸಂಗತಿಯು ಒಡೆದುಕಾಣುತ್ತದೆ. ಪ್ರಾರಂಭದಲ್ಲಿ ಪಂಡಿತನು ತನ್ನ ಇಚ್ಛಾಕಾರ್ಯವು ನಿರ್ವಿಘ್ನತೆಯಿಂದ ಸಿದ್ಧಿಸುವದಕ್ಕಾಗಿ ಮಂಗಲರೂಪವಾದ ಗಂಗೋದಕದ ಪ್ರಾರ್ಥನೆಯನ್ನು ಮಾಡಿಕೊಂಡಿದ್ದಾನೆ:-

ಸಮೃದ್ಧಂ ಸೌಭಾಗ್ಯಂ ಸಕಲವಸುಧಾಯಾಃ ಕಿಮಪಿತನ್ ।
ಮಹೈಶ್ವರ್ಯಂಲೀಲಾ ಜನಿತ ಜಗತಃ ಖಂಡಪರಶೋಃ ॥
ಶ್ರುತೀನಾಂ ಸರ್ವಸ್ವಂ ಸುಕೃತಮಥಮೂರ್ತಂ ಸುಮನಸಾಂ ।
ಸುಧಾಸೌಂದರ್ಯಂ ತೇ ಸಲಿಲಮಶಿವಂ ನಃ ಶಮಯತು ॥ ೧ ॥

ಹೇಗಂಗೇ ಸಕಲವಸುಧಾಯಾಃ ಕಿಮಪಿ ಸಮೃದ್ಧಂ ಸೌಭಾಗ್ಯಂ ಲೀಲಾಜನಿತಜಗತಃ ಖಂಡಪರಶೋಃ ಮಹೈಶ್ವರ್ಯಂ ಶ್ರುತೀನಾಂ ಸರ್ವಸ್ವಂ ಸುಮನಸಾಂಮೂರ್ತಂ ಸುಕೃತಂ ಅಥಸುಧಾಸೌಂದರ್ಯಂ ತತ್‌ತೇಸಲಿಲಂ ನಃ ಅಶಿವಂ ಶಮಯತು.

ಎತಾ ಗಂಗೆಯೆ, ಯಾವತ್ತು ಭೂಮಿಗೆ ಅವರ್ಣನೀಯವಾದ ಅತಿಶಯ ಸೌಭಾಗ್ಯವನ್ನು ಕೊಡುವ, ಲೀಲೆಯಿಂದ ಚತುರ್ದಶಲೋಕಗಳನುಂಟುಮಾಡಿದ ಶಂಕರನಿಗೆ ಮಹಾ ಐಶ್ವರ್ಯ ಸ್ವರೂಪವಾದ, ಯಾವತ್ತು ವೇದಗಳಿಗೆ ಸಾರ ಭೂತವಾದ ಇಂದ್ರಾದಿ ದೇವತೆಗಳಿಗೆ ಮೂರ್ತಿಮಂತ ಪುಣ್ಯ ಸ್ವರೂಪವಾದ, ಅಮೃತದಂತೆ ರುಚಿಕರವೂ ಅಮರತ್ವಪ್ರದವೂ ಆದ ನಿನ್ನ ಜಲವು ನಮ್ಮ ಪಾಪಗಳನ್ನು ನಾಶಮಾಡಲಿ.

ದರಿದ್ರಾಣಾಂ ದೈನ್ಯಂ ದುರಿತಮಥ ದುರ್ವಾಸನಹೃದಾಂ ।
ದ್ರುತಂ ದೂರೀಕುರ್ವನ್ ಸಕೃದಪಿಗತೋ ದೃಷ್ಟಿ ಸರಣಿಮ್ ॥
ಅಯುದ್ರಾಗಾವಿದ್ಯಾ ದ್ರುಮದಲನದೀಕ್ಷಾ ಗುರುರಿಹ ।
ಪ್ರವಾಹಸ್ತೇ ವಾರಾಂ ಶ್ರಿಯಮಯಮಪಾರಾಂ ದಿಶತುನಃ ॥೨॥

ಭೋ ಗಂಗೇ, ಇಹದೃಷ್ಟಿಸರಣಿಂ ಸಕೃತ್ ಅಪಿಗತಃ ( ಸನ್ ) ದರಿದ್ರಾಣಾಂ ದೈನ್ಯಂ ಅಥ ದುರ್ವಾಸನಹೃದಾಂ ದುರಿತಂ ಅಪಿ ದ್ರುತಂ ದೂರೀಕುರ್ವನ್ ದ್ರಾಗಾವಿದ್ಯಾದ್ರುಮ ದಲನದೀಕ್ಷಾಗುರುಃ ಅಯಂ ತೇವಾರಾಂ ಪ್ರವಾಹಃ ನಃ ಅಪಾರಾಂ ಶ್ರಿಯಂ ದಿಶತು.

ಎಲೌ ಭಾಗೀರಥಿಯೇ, ನಿನ್ನ ಪ್ರವಾಹವು ದರಿದ್ರನ ದೃಷ್ಟಿಗೆ ಬಿದ್ದದ್ದಾದರೆ, ಕೂಡಲೇ ಅವನ ದಾರಿದ್ರ್ಯವನ್ನು ಹೋಗಲಾಡಿಸುವದು! ದರ್ಶನ ಮಾತ್ರದಿಂದ ದುಷ್ಟ ಮನುಷ್ಯನ ಪಾತಕವನ್ನು ನಾಶಮಾಡುವದು; ಈ ಮಾಯಾಮಯ ಅವಿದ್ಯಾ ರೂಪವಾದ ಸಂಸಾರ ವೃಕ್ಷವನ್ನು ನಾಶಮಾಡುವದಕ್ಕೆ ಉಪದೇಶಮಾಡುವ ಗುರುವಿನಂತಿರುವದು; ಇಂಥ ನಿನ್ನ ಜಲಪ್ರವಾಹವು ನಮಗೆ ಅಪಾರವಾದ ಸಂಪತ್ತಿಯನ್ನು ಕೊಡಲಿ.

ಉಪಂಚನ್ಮಾರ್ತಂಡಸ್ಫಟಿಕ ಪಟಿಹೇರಂಬ ಜನನೀ ।
ಕಟಾಕ್ಷವ್ಯಾಕ್ಷೇಪಕ್ಷಣ ಜನಿತ ಸಂಕ್ಷೋಭನಿವಹಾಃ ॥
ಭವಂತು ತ್ವಂಗಂತೋ ಹರಶಿರಸಿ ಗಂಗಾತನುಭುವಃ ।
ತರಂಗಾಃ ಪ್ರೋತ್ತುಂಗಾ ದುರಿತಭಯಭಂಗಾಯ ಭವತಾಂ ॥೩

ಸಂಕ್ಷೋಭವನಿವಹಾಃ ಹರಶಿರಸಿ ತ್ವಂಗಂತಃ ಗಂಗಾತನುಭುವಃ ಪ್ರೋತ್ತುಂಗಾಃ ತರಂಗಾಃ ಭವತಾಂ ದುರಿತ ಭಯಭಂಗಾಯ ಭವಂತು.

ಉದಯಿಸುತಲಿರುವ ಸೂರ್ಯನಂತೆ ಆರಕ್ತವಾದ ಸವತೀ ಮತ್ಸರಗ್ರಸ್ತಳಾದ ಪಾರ್ವತಿಯ ನೇತ್ರ ಕಟಾಕ್ಷಗಳ ದೆಶೆಯಿಂದ ಭಯಹೊಂದಿದ ಅವನ ಶಿರಸ್ಸಿನಲ್ಲಿ ಕಂಪಿಡಿಸುತ್ತಲಿರುವ ಗಂಗೆಯ ಅತ್ಯುಚ್ಚತರಂಗಗಳು ಭಕ್ತರ ಪಾಪವನ್ನೂ ಭಯವನ್ನೂ ನಾಶಮಾಡಲಿ.

ತವಾಲಂಬಾದಂಬ ಸ್ಫುರದಲಘುಗರ್ವೇಣ ಸಹಸಾ ।
ಮಯಾ ಸರ್ವೇಽವಜ್ಞಾಸರಣಿಮಥ ನೀತಾಃ ಸುರಗಣಾಃ ॥
ಇದಾನೀಮೌದಾಸ್ಯಂ ಭಜಸಿ ಯದಿ ಭಾಗೀರಥಿ ತದಾ ।
ನಿರಾಧಾರೋ ಹಾ ರೋದಿಮಿ ಕಥಯ ಕೇಷಾಮಿಹಪುರಃ ॥೪॥

ಹೇ ಅಂಬ, ತವ ಆಲಂಬಾತ್ ಸ್ಫುರದಲಘುಗರ್ವೇಣ ಮಯಾ, ಸಹಸಾ ಸರ್ವೇಪಯಾ ಸುರಗಣಾಃ ಅವಜ್ಞಾಸರಣಿಂ ನೀತಃ ಅಥ ಹೇಭಾಗೀರಥಿ, (ತ್ವಂ) ಔದಾಸ್ಯಂ ಭಜಸಿ ತದಾ ನಿರಾಧಾರಃ ( ಅಹಮ್ ) ಇಹ ಕೇಷಾಂಪುರಃ ಹಾರೋದಿ? ( ತತ್ತ್ವಂಏವ ) ಕಥೆಯ.

ಎಲೌ ಜನನಿಯೇ, ನಿನ್ನ ಆಶ್ರಯದಿಂದ ಗರ್ವಿಷ್ಠನಾದ ನಾನು, ಬೇರೆ ವಿಚಾರವನ್ನು ಮಾಡದೆ, ಸಕಲದೇವತೆಗಳನ್ನು ತಿರಸ್ಕರಿಸಿದೆನು. ಎಲೌ ಭಾಗೀರಥಿಯೆ, ಈಗ ನೀನು ನನ್ನ ವಿಷಯದಲ್ಲಿ ಉದಾಸೀನತೆಯನ್ನು ತೋರ್ಪಡಿಸುವೆಯಾದರೆ, ನಿರಾಧಾರನಾದ ನಾನು ಈ ಲೋಕದಲ್ಲಿ ಯಾರಬಳಿಯಲ್ಲಿ ಹೋಗಿ ದುಃಖದಿಂದ ಅಳಲಿ? ಇದನ್ನು ನೀನೇ ನನಗೆ ಹೇಳಿ ಕೊಡು. (ಈ ಶ್ಲೋಕದಲ್ಲಿ ಕವಿಯು, ಶರಣು ಹೋಗಲು ತನಗೆ ಬೇರೆ ಆಶ್ರಯ ಸ್ಥಳಗಳಿಲ್ಲ, ಆದುದರಿಂದ ನೀನೇ ನನ್ನನ್ನು ದ್ಧರಿಸು, ಎಂದು ಗಂಗಾಮಾತೆಯನ್ನು ಅನನ್ಯಭಾವದಿಂದ ಬೇಡಿಕೊಂಡಿದ್ದಾನೆ.)

ಸ್ಮೃತಿಂಯಾತಾ ಪುಂಸಾಮಕೃತಸುಕೃತಾನಾಮಪಿಚಯಾ ।
ಹರತ್ಯಂತಸ್ತಂದ್ರಾಂ ತಿಮಿರಮಿವ ಚಂಡಾಂಶುಸರಣಿಃ ॥
ಇಯಂ ಸಾತೇ ಮೂರ್ತಿಃ ಸಕಲಸುರಸಂಸೇವ್ಯಸಲಿಲಾ ।
ಮಮಾಂತಃ ಸಂತಾಪಂ ತ್ರಿವಿಧಮಪಿ ಪಾಪಂ ಚ ಹರತಾಮ್ ॥ ೫ ॥

(ಹೇಗಂಗೇ,) ಯಾ ಅಕೃತಸುಕೃತಾನಾಂ ಪುಂಸಾಂ ಅಪಿ ಸ್ಮೃತಿಂ ಯಾತಾ ಚ (ಸತಿ) ಚಂಡಾಂಶು ಸರಣಿಃ ತಿಮಿರಂ ಇವ ಅಂತಸ್ತಂದ್ರಾಂ ಹರತಿ ಸಾ ಇಯಂ ಸಕಲಸುರಸಂಸೇವ್ಯ ಸಲಿಲಾ ತೇ ಮೂರ್ತಿ: ಮಮ ಅಂತಃಸಂತಾಪಂ ಅಥ ತ್ರಿವಿಧಂ ಪಾಪ ಚ ಹರತಾಮ್.

ಎಗಲೌಂಗೆಯೆ, ನಿನ್ನ ಮೂರ್ತಿಯು ಪಾಪಿಗಳ ಸ್ಮರಣಪಂಥದಲ್ಲಿ ಬಂದರೆ ಸಾಕು; ಅದು ಸೂರ್ಯನು ತನ್ನ ಕಿರಣದಿಂದ ಕತ್ತಲೆಯನ್ನು ನಾಶ ಮಾಡುವಂತೆ, ಅವರ ಅಂತಃಕರಣದಲ್ಲಿಯ ಪಾಪಗಳನ್ನು ನಾಶ ಮಾಡುವದು. ಇಂಥ ನಿನ್ನ ಸಕಲ ದೇವತೆಗಳಿಗೆ ಪೂಜ್ಯವಾದ ಪ್ರವಾಹವುಳ್ಳ ಮೂರ್ತಿಯು ನನ್ನ ಹೃದಯದಲ್ಲಿಯ (ಅಧ್ಯಾತ್ಮಿಕ ಅಧಿಭೌತಿಕ, ಆಧಿದೈವಿಕ) ತಾಪಗಳನ್ನು, ತ್ರಿವಿಧ (ಕಾಯಿಕ, ವಾಚಿಕ, ಮಾನಸಿಕ) ಪಾಪಗಳನ್ನೂ ನಾಶಮಾಡಲಿ.

ಅಪಿ ಪ್ರಾಜ್ಯಂ ರಾಜ್ಯಂ ತೃಣಮಿವ ಪರಿತ್ಯಜ್ಯ ಸಹಸಾ ।
ವಿಲೋಲದ್ವಾನೀರಂ ತವಜನಸಿತೀರಂ ಶ್ರಿತವತಾಮ್ ॥
ಸುಧಾತಃ ಸ್ವಾದೀಯಃ ಸಲಿಲಭರಮಾತೃಪ್ತಿ ಪಿಬತಾಂ ।
ಜನಾನಾಮಾನಂದಃ ಪರಿಸಹತಿ ನಿರ್ವಾಣ ಪದವೀಮ್ ॥ ೬ ॥

ಭೋಃ ಜನನಿ, ಪ್ರಾಜ್ಯಂ ರಾಜ್ಯಂ ಅಪಿ ಸಹಸಾತೃಣಂ ಇವ ಪರಿತ್ಯಜ್ಯ, ವಿಲೋಲದ್ವಾನೀರಂ ತವತೀರಂ ಶ್ರಿತವತಾಂ, ಸುಧಾತಃ ಸ್ವಾದೀಯ: ಸಲಿಲಭರಂ ಆತೃಪ್ತಿ ಪಿಬತಾಂ ಜನಾನಾಂ ಆನಂದಃ, ನಿರ್ವಾಣಪದವೀಂ ಪರಿಸಹತಿ.

ಎಲೌ ಮಾತೆಯೇ, ಅಖಂಡವಾದ ರಾಜ್ಯವನ್ನು ಕೂಡ ಸಹಸಾ ತೃಣದಂತೆ ಭಾವಿಸಿ, ಅದನ್ನು ಬಿಟ್ಟು ಬಂದು, ಗಾಳಿಯಿಂದ ಅಲ್ಲಾಡುತ್ತಲಿರುವ ವೇತಸವೃಕ್ಷಗಳುಳ್ಳ (ದಟ್ಟವಾದ ನೆರಳುಳ್ಳ) ನಿನ್ನ ತೀರವನ್ನು ಆಶ್ರಯಿಸಿ, ಅಮೃತಕಿಂತಲೂ ರುಚಿಕರವಾದ ನಿನ್ನ ನೀರನ್ನು ಯಥೇಚ್ಛವಾಗಿ ಕುಡಿಯುತ್ತಲಿರುವ ಜನರ ಆನಂದವು ಮೋಕ್ಷದ ಸೌಖ್ಯವನ್ನು ತಿರಸ್ಕರಿಸುತ್ತಿರುವದು.

ಪ್ರಭಾತೇ ಸ್ನಾತೀನಾಂ ನೃಪತಿರಮಣೀನಾಂ ಕುಚತಟೇ ।
ಗತೋ ಯಾವನ್ಮಾತರ್ಮಿಲತಿ ತವ ತೋಯೈರ್ಮೃಗಮದಃ ॥
ಮೃಗಾಸ್ತಾವದ್ವೈಮಾನಿಕಶತಸಹಸ್ರೈಃ ಪರಿವೃತಾಃ ।
ವಿಶಂತಿ ಸ್ವಚ್ಛಂದಂ ವಿಮಲ ವಪುಷೋ ನಂದನವನಮ್ ॥ ೭ ॥

ಭೋ ಮಾತಃ, ಪ್ರಭಾತೇ ಸ್ನಾತೀನಾಂ ನೃಪತಿರಮಣೀನಾಂ ಕುಚತಟೇ ಗತಃ ಮೃಗಮದಃ, ತವತೋಯೈಃ ಯಾವತ್ ಮಿಲತಿ ತಾವತ್ ಮೃಗಾಃ, ವೈಮಾನಿಕಶತಸಹಸ್ರೈಃ ಪರಿವೃತಾಃ ವಿಮಲವಪುಷಃ ಸಂತಃ, ಸ್ವಚ್ಛಂದಂ ನಂದನವನಂ ವಿಶಂತಿ.

ಎಲೌ ಜನನಿಯೇ, ಪ್ರಾತಃಕಾಲದಲ್ಲಿ ಸ್ನಾನ ಮಾಡುತ್ತಿರುವ ರಾಜಸ್ತ್ರೀಯರ ಕುಚಗಳಿಗೆ ಹತ್ತಿದ ಕಸ್ತೂರಿಯು ನಿನ್ನ ನೀರಿನಲ್ಲಿ ಕೂಡಿಹೋಗುತ್ತಲೇ, ಆ (ಕಸ್ತೂರಿಯನ್ನುಂಟು ಮಾಡಿದ) ಮೃಗಗಳು ಸಾವಿರಾರು ದೇವತೆಗಳಿಂದ ಸತ್ಕಾರ ಹೊಂದಿದವರಾಗಿ, ದಿವ್ಯ ದೇಹವನ್ನು ಹೊಂದಿ, ಯಥೇಚ್ಛವಾಗಿ (ಕ್ರೀಡಿಸುವದಕ್ಕೋಸುಗ ಇಂದ್ರನ) ನಂದನವನವನ್ನು ಪ್ರವೇಶಿಸುತ್ತಾರೆ.

ಸ್ಮೃತಂ ಸದ್ಯಃ ಸ್ವಾಂತಂ ವಿರಚಯತಿ ಶಾಂತಂ ಸಕೃದಪಿ ।
ಪ್ರಗೀತಂ ಯತ್ಪಾಪಂ ಝಟಿತಿ ಭವತಾಪಂ ಚ ಹರತಿ ॥
ಇದಂ ತದ್ಗಂಗೇತಿ ಶ್ರವಣ ರಮಣೀಯಂ ಖಲುಪದಂ ।
ಮಮ ಪ್ರಾಣಪ್ರಾಂತೇರ್ವದನಕಮಲಾಂತರ್ವಿಲಸತು ॥ ೮ ॥

(ಹೇ ಭಾಗೀರಥಿ,) ಯತ್ ಸಕೃತ್ ಅಪಿ ಸ್ಮೃತಂ (ಸತ್) ಝಟಿತಿ ಪಾಪಂ (ಚ) ಭವತಾಪಂ ಹರತಿ ತತ್ ಇದಂ ಖಲು ಶ್ರವಣರಮಣೀಯಂ ಗಂಗಾ ಇತಿ ಪದಂ ಪ್ರಾಣಪ್ರಾಂತೇ: ವದನ ಕಮಲಾಂತ: ವಿಲಸತು.

ಎಲೌ ಭಾಗೀರಥಿಯೆ, ನಿನ್ನ ನಾಮವನ್ನು ಒಂದುಸಾರೆಯಾದರೂ ಸ್ಮರಿಸಿದ್ದಾದರೆ, ಕೂಡಲೇ ಮನಸ್ಸಿಗೆ ಶಾಂತವನ್ನುಂಟು ಮಾಡುವದು; ಮತ್ತು ನಾಮಗೀ

ತೆಯನ್ನು ಹಾಡಿದ್ದಾದರೆ, ಅದು ಕೂಡಲೇ ಪಾಪವನ್ನೂ ಸಂಸಾರ ಸಂಬಂಧವಾದ ತಾಪವನ್ನೂ ನಾಶ ಮಾಡುತ್ತದೆ. ಇಂಥ ನಿನ್ನ ಕರ್ಣೇಂದ್ರಿಯ ಮಧುರವಾದ ಗಂಗಾ ಎಂಬ ಪದವು ಅಂತ್ಯಕಾಲದಲ್ಲಿ ನನ್ನ ಮುಖಕಮಲದಲ್ಲಿ ಶೋಭಿಸಲಿ.

ಯದಂತಃ ಖೇಲಂತೋ ಬಹುಲತರಸಂತೋಷಭರಿತಾಃ ।
ನ ಕಾಕಾ ನಾಕಾಧೀಶ್ವರನಗರ ಸಾಕಾಂಕ್ಷಮನಸಃ ॥
ನಿವಾಸಾಲ್ಲೋಕಾನಾಂ ಜನಿಮರಣ ಶೋಕಾಪಹರಣಂ ।
ತದೇತತ್ತೇ ತೀರಂ ಶ್ರಮಶಮನಧೀರಂ ಭವತು ನಃ ॥ ೯ ॥

(ಭೋ ಭಾಗೀರಥಿ,) ಯದಂತಃ ಖೇಲಂತಃ ಕಾಕಾಃ, ಬಹುಲತರಸಂತೋಷಭರಿತಾಃ (ಸಂತಃ) ನಾಕಾಧೀಶ್ವರ ನಗರ ಸುಕಾಂಕ್ಷಮನಸಃ ನ (ಭವಂತಿ) ನಿವಾಸಾತ್ ಲೋಕಾನಾಂ ಜನಿ-ಮರಣ-ಶೋಕಾಪಹರಣಂ ತೇ ತತ್ ಏತತ್ ತೀರಂ. ನಃ ಶ್ರಮಶಮನಧೀರಂ ಭವತು.

ಎಲೌ ಭಾಗೀರಥೀಯೆ, ನಿನ್ನ ತೀರದಲ್ಲಿ ಕ್ರೀಡಿಸುತ್ತಲಿರುವ ಕಾಗೆಗಳು ಶ್ರೀಪ್ರವಾದ ಆನಂದದಲ್ಲಿ ನಿಮಗ್ನವಾದವುಗಳಾಗಿ, ಸ್ವರ್ಗ ಸೌಖ್ಯವನ್ನು ಕೂಡ ಅಲ್ಲಗಳೆಯುತ್ತವೆ; ಮತ್ತು ನಿನ್ನ ತೀರವು ವಾಸಿಸುತ್ತಿರುವ ಜನರ ಜನನ-ಮರಣಾದಿ ದುಃಖಗಳನ್ನು ನಾಶಮಾಡುತ್ತದೆ. ಇಂಥ ನಿನ್ನ ದಂಡೆಯ ಪ್ರದೇಶವು ನಮ್ಮ ಶ್ರಮವನ್ನು ಇಲ್ಲದಂತೆ ಮಾಡುವದಕ್ಕೆ ಸಮರ್ಥವಾಗಲಿ.

ನ ಯಾತ್ಸಾಕ್ಷಾದ್ವೇದೈರಪಿ ಗಲಿತಭೇದೈರವಸಿತಂ ।
ನ ಯಸ್ಮಿನ್ ಜೀವಾನಾಂ ಪ್ರಸರತಿ ಮನೋವಾಗವಸರಃ ॥
ನಿರಾಕಾರಂ ನಿತ್ಯಂ ನಿಜಮಹಿಮ ನಿರ್ವಾಸಿತತಮೋ ।
ವಿಶುದ್ಧಂ ಯತ್ತತ್ತ್ವಂ ತವ ಜನನಿ ತತ್ವಂ ನ ವಿಷಯಃ ॥ ೧೦ ॥

ಹೇ ಸುರತಟಿನಿ, ಯತ್ ಗಲಿತ ಭೇದೈಃ ವೇದೈಃ ಅಪಿ ಸಾಕ್ಷಾತ್ ನ ಅವಸಿತಂ ಯಸ್ಮಿನ್ ಜೀವಾನಾಂ ಮನೋವಾಗವಸರಃ ನ ಪ್ರಸರತಿ. ನಿರಾಕಾರಂ ನಿತ್ಯಂ ನಿಜ-ಮಹಿಮ-ನಿರ್ವಾಸಿತ-ತಮಃ ವಿಶುದ್ಧಂ ಯತ್ ತತ್ತ್ವಂ (ಅಸಿ). ವಿಷಯಃ ನ (ಅಸಿ).

ಎಲೌ ಭಾಗೀರಥಿಯೇ, ಅದ್ವೈತಮತ ಪ್ರತಿಪಾದಕಗಳಾದ ವೇದಗಳಿಗೂ ಕೂಡ ಪ್ರತ್ಯಕ್ಷವಾಗದ, ಪ್ರಾಣಿಗಳ ವಾಣಿಯನ್ನೂ ಮನಸ್ಸನ್ನೂ ಕುಂಠಿತವಾಗಿ ಮಾಡುತ್ತಿರುವ, ಆಕಾರರಹಿತವೂ, ನಿತ್ಯವೂ, ಸ್ವಯಂ ಪ್ರಕಾಶವೂ, ಮಾಯಾರಹಿ

ತವೂ ಆದ ಬ್ರಹ್ಮರೂಪವು ನೀನಾಗಿರುವೆ; ಇಂದ್ರಿಯಗಮ್ಯವಾದ ವಿಷಯವು ನೀನಲ್ಲ.

(ದೇವರು ಅಣುರೇಣು ತೃಣಕಾಷ್ಠಗಳನ್ನು ವ್ಯಾಪಿಸಿರುವನೆಂದು ಕೆಲವರು …ತರು ಹೇಳುತ್ತಾರೆ. ಪರಮಾತ್ಮನು ಈ ಜಗತ್ತನ್ನೆಲ್ಲ ವ್ಯಾಪಿಸಿ, ಹತ್ತುಬೆರಳು …ಟ್ಟುಳಿದಿರುವನೆಂದು ಮತ್ತೆ ಕೆಲವರು ಹೇಳುತ್ತಿದ್ದಾರೆ. ಇದರಿಂದ ನೋಡುತ್ತಿ …ು ಜಗತ್ತಿನಲ್ಲಿಯ ಪ್ರತಿಯೊಂದು ವಸ್ತುವಿನಲ್ಲಿ ದೇವರಿರುವನೆಂಬದು ಸಾಹಜಿಕವಾದದ್ದು. ಆದಕ್ಕಾಗಿಯೇ ನಮ್ಮ ಜನರು ಮೂರ್ತಿರೂಪಗಳಿಂದ ಶಿಲೆಗಳಲ್ಲಿ, ಪಶುವಾದ ಗೋವಿನಲ್ಲಿ, ಜಲರೂಪವಾದ ನದಿಯಲ್ಲಿ ದೇವತ್ವವನ್ನು ಭಾವಿಸಿ, ಇವುಗಳನ್ನು ಪೂಜಿಸುತ್ತ ಬಂದಿದ್ದಾರೆ; ಮತ್ತು ಇದರಿಂದ ತಮ್ಮ ಇಷ್ಟಾರ್ಥವನ್ನು ಪಡೆದಿದ್ದಾರೆ. ಪ್ರಕೃತದಲ್ಲಿ ಜಗನ್ನಾಥ ಪಂಡಿತನು ಗಂಗೆಯಲ್ಲಿ ಬ್ರಹ್ಮತ್ವವನ್ನಾರೋಪಿಸಿ, ಅವಳನ್ನು ಅನನ್ಯಭಾವದಿಂದ ಮರೆಹೊಕ್ಕಿದ್ದಾನೆ. ಮತ್ತು ಭಾಗೀರಥಿಗೆ ನೀನು ಸಾಕ್ಷಾತ್ ಬ್ರಹ್ಮರೂಪಳು, ಅನಿತ್ಯವಾದ ವಿಷಯರೂಪಳಲ್ಲ ಎಂದು ಸ್ಪಷ್ಟವಾಗಿ ಹೇಳಿದ್ದಾನೆ. ಪ್ರತಿಯೊಂದು ವಸ್ತುವಿನಲ್ಲಿ ಪರಮಾತ್ಮನಿರುವಾಗ ಲೋಕಪಾವನಳಾದ ಗಂಗೆಯಲ್ಲಿ ದೇವರಿಲ್ಲದಿರುವದು ಸಾಧ್ಯವಲ್ಲ. ಆದುದರಿಂದಲೇ ಜಗನ್ನಾಥ ಪಂಡಿತನು ತನ್ನ ಇಷ್ಟಸಿದ್ಧಿಯಾದ ಮುಕ್ತಿಯನ್ನು ಪಡೆದಿದ್ದಾನೆ)

ಮಹಾದಾನೈರ್ಧ್ಯಾನೈರ್ಬಹುವಿಧವಿತಾನೈರಪಿ ಚ ಯತ್ ।
ನ ಲಭ್ಯಂ ಘೋರಾಭಿಃ ಸುವಿಮಲತಪೋರಾಶಿಭಿರಪಿ ॥
ಅಚಿಂತ್ಯಂ ತದ್ವಿಷ್ಣೋಃ ಪದಮಖಿಲ ಸಾಧಾರಣತಯಾ ।
ದದಾನಾ ಕೇನಾಸಿ ತ್ವಮಿಹ ತುಲನೀಯಾ ಕಥಯ ನಃ ॥ ೧೧ ॥

(ಹೇ ಗಂಗೇ), ಮಹಾದಾನೈಃ ಧ್ಯಾನೈಃ ಬಹುವಿಧವಿತಾನೈಃ ಅಪಿ ಚ ಘೋರಾಭಿಃ ಸುವಿಮಲತಪೋರಾಶಿಭಿಃ ಅಪಿ ಯತ್ ನಲಭ್ಯಂ, ತತ್ ಅಚಿಂತ್ಯಂ ವಿಷ್ಣೋಃ ಪದಂ ಅಖಿಲಸಾಧಾರಣತಯಾ ದದಾನಾಂ ತ್ವಂ ಇಹ ಕೇನ ತುಲನೀಯಾ ಅಸಿ? ನಃ ಕಥಯ.

ಗಂಗಾಮಾತೆಯು, ಶ್ರೇಷ್ಠವಾದ ದಾನದಿಂದಲೂ, ಧ್ಯಾನದಿಂದಲೂ, ಅನೇಕ ಪ್ರಕಾರದ ಯಜ್ಞಗಳಿಂದಲೂ, ಕಷ್ಟ ಸಾಧ್ಯವಾದ ನಿರ್ಮಲ ತಪೋರಾಸಿಯಿಂದಲೂ ದೊರಕಿಸಲಸಾಧ್ಯವಾದ ಆ ಅಚಿಂತ್ಯ ವಿಷ್ಣುಪದ (ವೈಕುಂಠ ಅಥವಾ ಮೋಕ್ಷ) ವನ್ನು ನೀನು ಎಲ್ಲರಿಗೂ ಸಮಾನ ಭಾವದಿಂದ ಕೊಡುತ್ತಿರುವೆ. ಇಂಥ ನಿನಗೆ ಸರಿಯಾದವರಾರು? ನಿನ್ನನ್ನು ಯಾರೊಡನೆ ಹೋಲಿಸಬೇಕು? ಇದನ್ನು ನೀನೇ ನಮಗೆ ಹೇಳಿಕೊಡು.

ನೃಣಾಮೀಕ್ಷಾಮಾತ್ರಾದಪಿ ಪರಿಹರಂತ್ಯಾ ಭವಭಯಂ
ಶಿವಾಯಾಸ್ತೇ ಮೂರ್ತೇಃ ಕ ಇಹ ಮಹಿಮಾನಂ ನಿಗದತು ॥
ಅಮರ್ಷಮ್ಲಾನಾಯಾಃ ಪರಮನುರೋಧಂ ಗಿರಿಭುವೋ
ವಿಹಾಯ ಶ್ರೀಕಂಠಃ ಶಿರಸಿ ನಿಯತಂ ಧಾರಯತಿ ಯಾಮ್ ॥ ೧೨

( ಭೋ ಗಂಗೇ, ) ಶ್ರೀಕಂಠಃ, ಅಮರ್ಷಮ್ಲಾನಾಯಾಃ ಗಿರಿಭುವಃ ಪರಂ ಅನುರೋಧಂ ವಿಹಾಯ ಯಾಂ ನಿಯತಂ ಶಿರಸಿ ಧಾರಯತಿ, ( ತಸ್ಯಾಃ ) ಈಕ್ಷಾಮಾತ್ರಾತ್ ಅಪಿ ನೃಣಾಂ ಭವಭಯಂ ಪರಿಹರಂತ್ಯಾಃ ತೇ ಮೂರ್ತೇಃ ಮಹಿಮಾನಂ ಇಹ ಕಃ ನಿಗದತು?

ಎಲೌ ಗಂಗೆಯೇ ಶ್ರೀಶಂಕರನು ಸವತೀಮತ್ಸರದಿಂದ ಸಿಟ್ಟಿಗೆದ್ದು ಅತಿಖಿನ್ನಳಾದ ಪಾರ್ವತಿಯನ್ನು ಸಂತಯಿಸುವದನ್ನು ಬಿಟ್ಟು, ಪರಮಪ್ರೀತಿಯಿಂದ ನಿನ್ನನ್ನು ಯಾವಾಗಲೂ ತಲೆಯಲ್ಲಿ ಧಾರಣಮಾಡಿಕೊಂಡಿರುವನು ; ನೀನು ದರ್ಶನಮಾತ್ರದಿಂದ ಮನುಷ್ಯರ ಭವಭಯವನ್ನು ದೂರ ಮಾಡಿ, ಅವರ ಕಲ್ಯಾಣವನ್ನುಂಟು ಮಾಡುವೆ. ಇಂಥ ನಿನ್ನ ಮೂರ್ತಿಯ ಮಹಿಮೆಯನ್ನು ವರ್ಣಿಸಲು ಸಮರ್ಥನಾದ ಮನುಷ್ಯನು ಈ ಜಗತ್ತಿನಲ್ಲಿ ಯಾವನಿರುವನು? ( ಯಾರೂ ಇಲ್ಲ)

ವಿನಿಂದ್ಯಾನ್ಯುನ್ಮತ್ತೈರಪಿ ಚ ಪರಿಹಾರ್ಯಾಣಿ ಪತಿತೈಃ ।
ಅವಾಚ್ಯಾನಿ ವ್ರಾತ್ಯೈಃ ಸಪುಲಕಮಪಾಸ್ಯಾನಿ ಪಿಶುನೈಃ ॥
ಹರಂತೀ ಲೋಕಾನಾಮನವರತಮೇನಾಂಸಿ ಕಿಯತಾಂ ।
ಕದಾಪ್ಯಶ್ರಾಂತಾ ತ್ವಂ ಜಗತಿ ಪುನರೇಕಾ ವಿಜಯಸೇ ॥ ೧೩ ॥

( ಭೋ ಗಂಗೇ, ) ಉನ್ಮತ್ತೈಃ ಅಪಿ ವಿನಿಂದ್ಯಾನಿ, ಪತಿತೈಃ ಪರಿಹಾರ್ಯಾಣಿ, ವ್ರಾತ್ಯೈಃ ಅವಿಚ್ಯಾನಿ, ಚ ಪಿಶುನೈಃ ಸಪುಲಕಂ ಅಪಾಸ್ಯಾನಿ ಕಿಯತಾಂ ಲೋಕಾನಾಂ ಏನಾಂಸಿ ಅನವರತಂ ಹರಂತೀ, ಪುನಃ ಕದಾಚಿಪಿ ಅಶ್ರಾಂತಾ ಏಕಾ ತ್ವಂ ಜಗತಿ ವಿಜಯಸೇ.

ಎಲೌ ಭಾಗೀರಥಿಯೇ ಉನ್ಮತ್ತ ಪುರುಷರಿಂದಲೂ ಸಹ ತಿರಸ್ಕರಣೀಯವಾದಂಥ, ಪತಿತ ( ಪ್ರಾಯಶ್ಚಿತ್ತದಿಂದ ಶುದ್ಧರಾಗಲಿಕ್ಕೆ ಬಾರದವ ) ರಿಂದಲೂ ಅನಾದರವನ್ನು ಹೊಂದಿದಂಥ, ವ್ರಾತ್ಯ ( ಗರ್ಭಾದಾನಾದಿ ಸಂಸ್ಕಾರ ರಹಿತರಾದವ ) ರಿಂದಲೂ ಅತಿಶಯ ನಿಂದೆಯನ್ನು ಹೊಂದಿದಂಥ ಎಷ್ಟೋ ಜನರ ಪಾಪಗಳನ್ನು ಯಾವಾಗಲೂ ನಾಶ ಮಾಡುತ್ತಿರುವೆ; ಮತ್ತು ನೀನು ಎಂದೂ ದಣಿಯುವದಿಲ್ಲ. ಇಂಥವಳು ಜಗತ್ತಿನಲ್ಲಿ ನೀನೊಬ್ಬಳೇ ಆಗಿ ವಿಜಯಿಸುತ್ತಲಿರುವೆ.

ಸ್ಖಲಂತೀ ಸ್ವರ್ಲೋಕಾದವನಿತಲಶೋಕಾಪಹೃತಯೇ ।
ಜಟಾಜೂಟಗ್ರಂಥೌ ಯದಸಿ ವಿನಿಬದ್ಧಾ ಪುರಭಿದಾ ।
ಅಯೇ ನಿರ್ಲೋಭಾನಾಮಪಿ ಮನಸಿ ಲೋಭಂ ಜನಯತಾಂ ।
ಗುಣಾನಾಮೇವಾಯಂ ತವಜನನಿ ದೋಷಃ ಪರಿಣತಃ ॥ ೧೪ ॥

ಅಯೇಜನನಿ, ಅವನಿತಲಶೋಕಾಪಹೃತಯೇ ಸ್ವರ್ಲೋಕಾತ್ ಸ್ಖಲಂತೀ (ತ್ವಂ) ಪುರಭಿದಾ ಜಟಾಜೂಟಗ್ರಂಥೌ ಯತ್ ವಿನಿಬದ್ಧಾ ಅಸಿ. (ಅತಃ) ನಿರ್ಲೋಭಾನಾಂ ಮನಸಿ ಅಪಿ ಲೋಭಂ ಜಯತಾಂ ತವಗುಣಾನಾಂ ಏವ ಅಯಂ ದೋಷಃ ಪರಿಣತಃ.

ಎಲೌ ಮಾತೆಯು, ನೀನು ಭೂಮಂಡಲದೊಳಗಿನ ಜನರ ದುಃಖ ಪರಿಹಾರಕ್ಕಾಗಿ ಸ್ವರ್ಗಲೋಕದಿಂದ ಅವನೀತಳಕ್ಕೆ ಅವತರಿಸಿದೆ; ಮತ್ತು ಮಹಾದೇವನಿಂದ ಜಟಾಜೂಟದಲ್ಲಿ ಬಂಧಿಸಿರಿಸಲ್ಪಟ್ಟವಳಾದೆ. ನಿರ್ಲೋಭಿಗಳ ಮನಸ್ಸಿನಲ್ಲಿಯೂ ಕೂಡ ಆಶೆಯನ್ನುಂಟು ಮಾಡುವ ನಿನ್ನಲ್ಲಿಯ ಗುಣವೇ ದೋಷರೂಪವಾಗಿ ಪರಿಣಮಿಸಿ, ನಿನ್ನ ಬಂಧನಕ್ಕೆ ಕಾರಣೀಭೂತವಾಯಿತು.

(ಈ ಶ್ಲೋಕದಲ್ಲಿ ಗಂಗಾಮಾತೆಯು ಬಂಧನವನ್ನು ಹೊಂದುವದಕ್ಕೆ ಕಾರಣೀಭೂತವಾದ ಸಂಗತಿಯನ್ನು ಹೇಳಿದ್ದಾನೆ. ಗಂಗೆಯು ಲೋಕಕಲ್ಯಾಣಕ್ಕಾಗಿ ಅವನಿಯಲ್ಲಿ ಅವತರಿಸಿದ್ದು, ಅವಳು ಸ್ವತಂತ್ರಳಾಗಿರಬೇಕಾದದ್ದು ಯೋಗ್ಯವಾಗಿತ್ತು. ಶ್ರೀಸಾಂಬನು ಅವಳನ್ನು ಸ್ವತಂತ್ರತೆಯಿಂದಿರಗೊಡಲಿಲ್ಲ. ನಿಜವಾಗಿ ನೋಡಿದರೆ ಅವನು ನಿರಿಚ್ಛನು. ಇಂಥ ನಿರಿಚ್ಛನ ಮನಸ್ಸಿನಲ್ಲಿಯೂ ಕೂಡ ಗಂಗೆಯು ಲೋಭವನ್ನುಂಟು ಮಾಡಿದಳು. ಇದರಿಂದ ಗಂಗಾನದಿಯ ಗುಣಮಹತಿಯನ್ನು ವರ್ಣಿಸಿದಂತಾಯಿತು. ಆದರೂ ಗುಣಿಗಳು ಸಕಲಜನರಿಗೂ ಬೇಕಾದುದರಿಂದ ಅವರು ಬಂಧನವನ್ನು ಹೊಂದಬೇಕಾದ ಪ್ರಸಂಗಗಳು ಮೇಲಿಂದಮೇಲೆ ಬರುತ್ತಲಿವೆ. ದುರ್ಜನ ಮನುಷ್ಯನನ್ನು ಇಲ್ಲವೆ ಕೆಟ್ಟ ವಸ್ತುವನ್ನು ಯಾರೂ ಹತ್ತರ ಇಟ್ಟುಕೊಳ್ಳಲು ಇಚ್ಛಿಸುವ ಸಂಭವ ವಿಲ್ಲ; ಆದರೆ ಉತ್ತಮ ಮನುಷ್ಯನನ್ನು ಇಲ್ಲವೆ ಚಲೋ ಒಡವೆಯನ್ನು ಕಂಡರೆ ಜನರು ಮುಗಿಬಿದ್ದು ಅವನ್ನು ತೆಗೆದುಕೊಳ್ಳಲು ಯತ್ನಿಸುತ್ತಿರುವರು. ಈ ಕಾರಣದಿಂದ ಗುಣಿಗಳ ಸ್ವಾತಂತ್ರ್ಯ ಹರಣವಾಗುವದರಿಂದ ಗುಣವು ದೋಷರೂಪವಾಗಿ ಪರಿಣಮಿಸಿದೆ ಯೆಂದು ಕವಿಯು ಹೇಳಿದ್ದಾನೆ.)

ಜಡಾನಂಧಾನ್ ಪಂಗೂನ್ ಪ್ರಕೃತಿಬಧಿರಾನುಕ್ತಿವಿಕಲಾನ್ ।
ಗ್ರಹಗ್ರಹಸ್ತಾನಸ್ತಾಖಿಲದುರಿತಸಿಸ್ತಾರ-ಸರಣೀನ್ ।

ನಿಲಿಂಪೈರ್ನಿರ್ಮುಕ್ತಾನಪಿ ಚ ನಿರಯಾಂತರ್ನಿಪತತೋ |
ನರಾನಂಬ ತ್ರಾತುಂ ತ್ವಮಿಹ ಪರಮಂ ಭೇಷಜಮಸಿ || ೧೫ ||

ಹೇ ಅಂಬ, ಇಹ ಜಡಾನ್, ಅಂಧಾನ್, ಪಂಗೂನ್, ಪ್ರಕೃತಿಬಧಿರಾನ್, ಉಕ್ತಿವಿಕಲಾನ್, ಗ್ರಹಗ್ರಸ್ತಾನ್, ಅಸ್ತಾಖಿಲದುರಿತನಿಸ್ತಾರಸರಣೀನ್ ನಿಲಿಂಪೈ: ಅಪಿ ನಿರ್ಮುಕ್ತಾನ್ ಚ ನಿರಯಾಂತ: ನರಾನ್ ತ್ರಾತುಂ ತ್ವಂ ಪರಮಂಭೇಷಜಂ ಅಸಿ.

ಎಲೌ ಜನನಿಯೇ, ಈ ಲೋಕದಲ್ಲಿಯು ಮೂರ್ಖರನ್ನೂ, ಕುರುಡರನ್ನೂ, ಹೆಳವರನ್ನೂ, ಹುಟ್ಟುಕಿವುಡರನ್ನೂ, ಮೂಕರನ್ನೂ, ಹುಚ್ಚರನ್ನೂ, ಮಹಾಪಾಪಿ (ಪ್ರಾಯಶ್ಚಿತ್ತದಿಂದ ಉದ್ಧಾರರಾಗಲಾರದ) ಜನರನ್ನೂ, ದೇವತೆಗಳಿಂದ ಸಹಾಯವನ್ನು ಹೊಂದಿದರೂ ಕೂಡ ಮುಕ್ತಿಯನ್ನು ಪಡೆಯಲಾರದವರನ್ನೂ, ಯಾವಾಗಲೂ ನರಕದಲ್ಲಿ ಬೀಳುತ್ತಿರುವ ಮನುಷ್ಯರನ್ನೂ, ಉದ್ಧಾರ ಮಾಡುವದಕ್ಕೆ ನೀನು ಪರಮಔಷಧ ಸ್ವರೂಪಳಾಗಿರುವೆ.

ಸ್ವಭಾವ-ಸ್ವಚ್ಛಾನಾಂ ಸಹಜ-ಶಿಶಿರಾಣಾಮಯಮಪಾ
ಮಪಾರಸ್ತೇ ಮಾತರ್ಜಗತಿ ಮಹಿಮಾ ಕೋಽಪಿ ಜಯತಿ ||
ಮುದಾ ಯೇ ಗಾಯಂತಿ ದ್ಯುತಲಮನವದ್ಯದ್ಯುತಿಭೃತಃ |
ಸಮಾಸಾದ್ಯಾದ್ಯಾಪಿ ಸ್ಫುಟಪುಲಕಸಾಂದ್ರಾಃ ಸಗರಜಾಃ || ೧೬ ||

ಭೋ ಮಾತಃ, ಸ್ವಭಾವ-ಸ್ವಚ್ಛಾನಾಂ ಸಹಜಶಿಶಿರಾಣಾಂ ತೇ ಅಪಾಂ ಅಪಾರಃ ಅಯಂ ಕಃ ಅಪಿ ಮಹಿಮಾ ಜಗತಿ ಜಯತಿ. ಅನವದ್ಯದ್ಯುತಿಭೃತಃ ಸ್ಫುಟಪುಲಕಸಾಂದ್ರಾಃ ಸಗರಜಾಃ ದ್ಯುತಲಂ ಆಸಾದ್ಯ ಅದ್ಯಾಪಿ ಮುದಾ ಯಂ ಗಾಯಂತಿ.

ಭೋ ಜನನಿ, ಸ್ವಾಭಾವಿಕವಾಗಿ ಸ್ವಚ್ಛವೂ, ತಣ್ಣಗೂ ಇರುವ ನಿನ್ನ ನೀರಿನ ಅಪರಂಪಾರವಾದ ಅವರ್ಣನೀಯ ಮಹಿಮೆಯು ಜಗತ್ತಿನಲ್ಲಿ ಅತ್ಯಂತ ಉತ್ಕರ್ಷವನ್ನು ಹೊಂದಿದ್ದಾಗಿದೆ.; ನಿನ್ನ ಉದಕಸ್ಪರ್ಶದಿಂದ ದಿವ್ಯದೇಹಗಳನ್ನು ಧರಿಸಿದ, ಪ್ರೇಮರೋಮಾಂಚಗಳಿದ್ದ ಸಗರರಾಜನಮಕ್ಕಳು ಸ್ವರ್ಗಲೋಕದಲ್ಲಿ ವಾಸಿಸುತ್ತಿದ್ದು, ಈಗಲೂ ಹರ್ಷದಿಂದ ನಿನ್ನ ಮಹಿಮಾ-ಗಾಯನವನ್ನು ಮಾಡುತ್ತಿದ್ದಾರೆ.

ಕೃತಕ್ಷುದ್ರೈನಸ್ಕಾನಥ ಝಟಿತಿ ಸಂತಪ್ತಮನಸಃ |
ಸಮುದ್ಧರ್ತುಂ ಸಂತಿ ತ್ರಿಭುವನತಲೇ ತೀರ್ಥನಿವಹಾಃ ||
ಅಪಿ ಪ್ರಾಯಶ್ಚಿತ್ತಪ್ರಸರಣಪಥಾತೀತಚರಿತಾನ್ |
ನರಾನೂರೀಕರ್ತುಂ ತ್ವಮಿಹ ಜನನಿ ತ್ವಂ ವಿಜಯಸೇ || ೧೭ ||

ಹೇ ಜನನೀ, ಕ್ಷುದ್ರೈನಸ್ಸಾನ್ ಅಥ ಚ ಝಟಿತಿ ಸಂತಪ್ತ ಮನಸಃ ನರಾನ್ ಸಮುದ್ಧರ್ತುಂ ತ್ರಿಭುವನತಲೇ ತೀರ್ಥನಿವಹಾಃ ಸಂತಿ. ಪ್ರಾಯಶ್ಚಿತ್ತಪ್ರಸರಣ ಪಥಾತೀತಚರಿತಾನ್ ಅಪಿ ದೂರೀಕರ್ತುಂ ತ್ವಂ ಇವ ತ್ವಂ ವಿಜಯಸೇ.

ಎಲೌ ತಾಯಿಯೇ, ಕ್ಷುದ್ರವಾದ ಪಾತಕಗಳನ್ನಾಚರಿಸಿ, ಕೂಡಲೇ ಪಶ್ಚಾತ್ತಾಪಹೊಂದಿದ ಜನರನ್ನು ಮುಕ್ತರನ್ನಾಗಿ ಮಾಡುವದಕ್ಕೆ ತ್ರಿಲೋಕದಲ್ಲಿರುವ ಅನೇಕ ತೀರ್ಥಗಳು ಸಮರ್ಥವಾಗಿವೆ; ಆದರೆ ಪ್ರಾಯಶ್ಚಿತ್ತಗಳಿರದ (ಬ್ರಹ್ಮಹತ್ಯಾದಿ ಮಹಾನ್) ಪಾತಕಗಳನ್ನಾಚರಿಸಿದವರನ್ನು ಉದ್ಧರಿಸುವವಳು ಕೇವಲ ನೀನೊಬ್ಬಳೇ ಆಗಿರುವೆ. ನಿನಗೆ ಸಮಾನರಾದವರು ಬೇರೆಯಾರೂ ಇಲ್ಲ.

ನಿಧಾನಂ ಧರ್ಮಾಣಾಂ ಕಿಮಪಿಚ ವಿಧಾನಂ ನವಮುದಾಂ |
ಪ್ರಧಾನಂ ತೀರ್ಥಾನಾಮಮಲ-ಪರಿಧಾನಂ ತ್ರಿಜಗತಃ ॥
ಸಮಾಧಾನಂ ಬುದ್ಧೇರಥ ಖಲು ತಿರೋಧಾನಮಧಿಯಾಂ ।
ಶ್ರಿಯಾಮಾಧಾನಂ ನಃ ಪರಿಹರತು ತಾಪಂ ತವ ವಪುಃ ॥ ೧೮ ||

(ಹೇ ಜನನಿ,) ಧರ್ಮಾಣಾಂ ನಿಧಾನಂ, ನವಮುದಾಂ ಕಿಮಪಿ ವಿಧಾನಂ, ತೀರ್ಥಾನಾಂ ಪ್ರಧಾನಂ, ತ್ರಿಜಗತಃ ಅಮಲ ಪರಿಧಾನಂ, ಬುದ್ಧೇಃ ಸಮಾಧಾನಂ ಅಧಿಯಾಂ ಖಲು ತಿರೋಧಾನಂ, ಅಥಶ್ರಿಯಾಂ ಆಧಾನಂ ತವ ವಪುಃ ನಃ ತಾಪಂ ಪರಿಹರತು

ಎಲೌ ಜನನಿಯೆ, ಸರ್ವ ಧರ್ಮಗಳ ಸ್ಥಾನವೂ, ಹೊಸಹೊಸ ಆಶ್ಚರ್ಯಕಾರಕ ಆನಂದಗಳನ್ನುಂಟು ಮಾಡುವ ಆಗರವೂ, ಯಾವತ್ತೂ ತೀರ್ಥಗಳಲ್ಲಿ ಶ್ರೇಷ್ಠತಮವಾದದ್ದೂ, ಮೂರೂಲೋಕಗಳ ನಿರ್ಮಲವಾದ ಪರಿಧಾನವಸ್ತ್ರವೂ, ಬುದ್ಧಿಗೆ ಸಮಾಧಾನವನ್ನುಂಟುಮಾಡುವದೂ, ದುಷ್ಟಬುದ್ಧಿಯುಮನುಷ್ಯರಿಗೆ ಕಾಣಿಸಲಾರದ್ದೂ, ಮೋಕ್ಷಾದಿ ಸಂಪತ್ತುಗಳ ಸಂಪಾದಕವೂ ಆದ ನಿನ್ನ ಪ್ರವಾಹರೂಪವಾದ ಶರೀರವು ನಮ್ಮ ತ್ರಿವಿಧ ತಾಪಗಳನ್ನು ದೂರೀಕರಿಸಲಿ.

ಪುರೋಧಾವಂ ಧಾವಂ ದ್ರವಿಣ ಮದಿರಾ ಘೂರ್ಣಿತದೃಶಾಂ।
ಮಹೀ-ಪಾನಾಂ ನಾನಾ-ತರುಣತರ ಖೇದಸ್ಯ ನಿಯತಮ್॥
ಮಮೈವಾಯುಂ ಮಂತುಃ ಸ್ವಹಿತಶತಹಂತುರ್ಜಡಧಿಯೋ।
ವಿಯೋಗಸ್ತೇ ಮಾತರ್ಯದಿಹ ಕರುಣಾತಃ ಕ್ಷಣಮಪಿ ||೧೯॥

ಭೋ ಮಾತಃ ಇಹತೇ ವಿಯೋಗಃ (ಇತಿ) ಯತ್ (ಅಭೂತ್) ಅಯುಂ ಮಂತುಃ ದ್ರವಿಣ ಮದಿರಾ ಘೂರ್ಣಿತದೃಶಾಂ ನಾನಾ ಮಹೀಪಾನಾಂ ಪುರೋ

ನಿಯುತಂ ಧಾವಂ ಧಾವಂ ತರುಣೇತರ ಹೇದಸ್ಯ ಸ್ಫುಟಿತ ಶತಪಂತುಃ ಜಡಧಿಯಃ ಮನ್ಯೈವ (ಅಸ್ತಿ) ಅತಃ ಕ್ಷಣಮಪಿ (ತ್ವಯಾ ಮಯಿ) ಕರುಣಾ (ಕರಣೀಯಾ)

ಎಲೌ ಮಾತೆಯೆ, ಈ ಲೋಕದಲ್ಲಿ ನಿನ್ನಿಂದ ದೂರ ಇದ್ದೆನು. ಈ ಮೇರೆಗೆ ನಿನ್ನ ವಿಯೋಗವನ್ನು ಹೊಂದಿದ್ದುದು ನನ್ನ ಅಪರಾಧವು. ಈ ವರೆಗೆ ನಾನು ದ್ರವ್ಯ ರೂಪ ಮದಿರೆಯಿಂದ ಮದಾಂಧರಾದ ಅನೇಕ ಅರಸರ ಬಳಿಗೆ ಧನಲೋಭಕ್ಕೋಸ್ಕರ ಗಾಗಿ ಮೇಲಿಂದ ಮೇಲೆ ಧಾವಿಸಿ ಧಾವಿಸಿ ಬೇಸತ್ತೆನು; ಆದರೆ ಇದರಿಂದ ನನಗೆ ಧನವು ದೊರೆಯದಿದ್ದುದರಿಂದ ಬಹಳ ದುಃಖಿತನಾದೆನು; ಮತ್ತು ನಿಜ ಹಿತವನ್ನು ಮರೆದು ಆತ್ಮ-ಘಾತಕನಾದೆನು. ಮೂರ್ಖನಾದ ನನ್ನ ವಿಷಯದಲ್ಲಿ ನೀನು ಕ್ಷಣ ಮಾತ್ರವಾದರೂ ದಯೆಯನ್ನು ತೋರಿಸು.

ಮರುಲ್ಲೀಲಾ ಲೋಲಲ್ಲಹರಿಲುಲಿತಾಂಭೋಜಪಟಲೀ
ಸ್ಖಲತ್ಪಾಂಸುವ್ರಾತ ಚ್ಛುರಣವಿಲಸತ್ಕಾಂಕುಮ ರುಚಿ ॥
ಸುರಸ್ತ್ರೀವಕ್ಷೋಜ ಕ್ಷರದಗರು ಜಂಬಾಲ ಜಟಿಲಂ।
ಜಲಂ ತೇ ಜಂಬಾಲಂ ಮಮ ಜನನಜಾಲಂ ಜರಯತು ॥೨೦॥

(ಹೇ ಮಾತಃ) ಮರುಲ್ಲೀಲಾ ಲೋಲಲ್ಲಹರಿ ಲುಲಿತಾಂಭೋ ಪಟಲೀ ಸ್ಖಲತ್ಪಾಂಸು ವ್ರಾತಚ್ಛುರಣ ವಿಸರತ್ಕಾಂಕುಮರುಚಿ, ಸುರಸ್ತ್ರೀವಕ್ಷೋಜ ಕ್ಷರದಗರು ಜಂಬಾಲ ಜಟಿಲಂ ಜಂಬಾಲಂ ತೇ ಜಲಂ ಮಮ ಜನನ ಜಾಲಂ ಜರಯತು.

ಎಲೌ ತಾಯಿಯೆ, ಗಾಳಿಯ ಚಂಚಲ ವಾದ ತೆರೆಗಳಿಂದ ಅಲ್ಲಾಡುತ್ತಿರುವ ಕಮಲಗಳ ಸಮೂಹದಿಂದ ಬೀಳುತ್ತಿರುವ ಮಕರಂದ-ಕಣಿಗಳ ಮಿಶ್ರಣದಿಂದ ಕೇಶರದಂತೆ ಚಂದ ಕಾಣುವ, ಇಂದ್ರಾದಿ ದೇವತೆಗಳ ಸ್ತ್ರೀಯರ ಸ್ತನಗಳಿಂದ (ಸ್ನಾನ ದಕಾಲಕ್ಕೆ) ಬಿದ್ದ ಕೃಷ್ಣಾಗರುವಿನ ಹುಡಿಯಿಂದ ಕೂಡಿದ ಮತ್ತು ಶೈವಾಲಗಳಿಂದ ಯುಕ್ತವಾದ ನಿನ್ನ ನೀರು ಪುನಃ ನನಗೆ ಜನನವನ್ನುಂಟುಮಾಡದಿರಲಿ (ಪುನರ್ಜನ್ಮ ವನ್ನು ತಪ್ಪಿಸಲಿ.)

ಸಮುತ್ಪತ್ತಿಃ ಪದ್ಮಾರಮಣ ಪದಪದ್ಮಾಮಲನಖಾತ್॥
ನಿವಾಸಃ ಕಂದರ್ಪಪ್ರತಿಭಟಜಟಾಜೂಟಭವನೇ ॥
ಅಥಾಯಂ ವ್ಯಾಸಂಗೋ ಹತಪತಿತನಿಸ್ತಾರಣವಿಧೌ ||
ನಕಸ್ಮಾದುತ್ಕರ್ಷಸ್ತವಜನನಿ ಜಾಗರ್ತ್ತಿ ಜಗತಿ ॥ ೨೧ ॥

ಹೇಜನನಿ, (ತವ) ಸಮುತ್ಪತಿಃ ಪದ್ಮಾರಮಣ ಪದಪದ್ಮಾಮಲನಖಾತ್; ನಿವಾಸಃ ಕಂದರ್ಪ ಪ್ರತಿಭಟ ಜಟಾಜೂಟಭವನೇಃ ಅಥ ಅಯಂ(ತೇ)ವ್ಯಾಸಂಗಃ

ಪತಿತ ನಿಸ್ತಾರಣವಿಧೌ :(ಅತಃ)ತವಜಗತಃ ಉತ್ಕರ್ಷಃ ಕಸ್ಮಾತ್ ನಜಾಗರ್ತು೦

ಎಲೌ ಜನನಿಯೆ, ನಿನ್ನ ಹುಟ್ಟಿದಸ್ಥಳವು ವಿಷ್ಣುವಿನ ಚರಣಕಮಲನಖವು; ನಿವಾಸಸ್ಥಳವು ಮಹಾದೇವನ ಜಟಾಜೂಟರೂಪವಾದ ಮನೆಯು; ಮತ್ತು ನಿನ್ನ ಉದ್ಯೋಗವು ಹತಾಶ(ವಿಷಶಸ್ತ್ರಘಾತಗಳಿಂದಸತ್ತಂಥವ)ರೂ ಪತಿತ (ಪ್ರಾಯಶ್ಚಿತಾರ್ಹ)ರೂ, ಜನ್ಮಾಂಧರೂ ಆದವರನ್ನುದ್ಧರಿಸುವದು. ಇಂಥ ನಿನ್ನ ಉತ್ಕರ್ಷವು ಜಗತ್ತಿನಲ್ಲಿ ಹೆಚ್ಚಾಗಿರದಿರುವದುಂಟೇ? ಎಲ್ಲರೂ ನಿನ್ನಗೌರವವನ್ನು ಮನ್ನಿಸಲೇಬೇಕು.

ನಗೇಭ್ಯೋ ಯಾಂತೀನಾಂ ಕಥಯ ತಟನೀನಾಂ ಕತಮಯಾ ॥
ಪುರಾಣಾಂ ಸಂಹರ್ತುಃ ಸುರಧುನಿ ಕಪರ್ದೋಽಧಿರುರುಹೇ ॥
ಕಯಾ ವಾ ಶ್ರೀಭರ್ತುಃ ಪದಕಮಲಮಕ್ಷಾಲಿಸಲಿಲೈಃ ॥
ತುಲಾಲೇಶೋ ಯಸ್ಯಾಂ ತವಜನನಿ ದೀಯೇತ ಕವಿಭಿಃ ॥೨೨॥

ಹೇ ಜನನಿ, ಕವಿಭಿಃ ಯಸ್ಯಾಂತವ ತುಲಾಲೇಶಃ ದೀಯೇತ?(ತಾದೃಶೀಕಾವರ್ತತೇ) ಹೇ ಸುರಧುನಿ, ನಗೇಭ್ಯೋ ಯಾಂತೀನಾಂ ತಟನೀನಾಂ ಕತಮಯಾ ಪುರಾಣಾಂ ಸಂಹರ್ತುಃ ಕಪರ್ದಃ ಅಧಿರುರುಹೇ? ಕಯಾ ವಾ ಶ್ರೀಭರ್ತುಃ ಪದಕಮಲಂ ಸಲಿಲೈಃ ಅಕ್ಷಾಲಿ.(ತತ್ತ್ವಂಏವ) ಕಥಯ.

ಎಲೌ ಜನನಿಯೆ, ಕವಿಗಳು ಯಾರೊಡನೆ ನಿನ್ನನ್ನು ಹೋಲಿಸಬೇಕು? ನಿನಗೆ ಸಮಾನವಾದ ಬೇರೆ ನದಿಗಳಿಲ್ಲವೇಇಲ್ಲ, ಅದರಿಂದ ಕವಿಗಳು ನಿನ್ನವರ್ಣನೆಯು ಪ್ರಸಂಗದಲ್ಲಿ ಉಪಮೆಯನ್ನುಪಯೋಗಿಸುವಂತೆ ಇಲ್ಲ. ಎಲೌಗಂಗೆಯೆ ಪರ್ವತದಿಂದ ಹೊರಟ ಅಸಂಖ್ಯನದಿಗಳಲ್ಲಿ ಯಾವನದಿಯು ಮಹಾದೇವನ ಜಟಾಜೂಟವನ್ನಾರೋಹಿಸಿದೆ? ಮತ್ತು ಯಾವನದಿಯು ತನ್ನನೀರಿನಿಂದ ವಿಷ್ಣುವಿನ ಚರಣಕಮಲವನ್ನು ತೊಳೆದದೆ? ಇದನ್ನು ನೀನೇ ನಮಗೆ ಹೇಳಿಕೊಡು.

ವಿಧತ್ತಾಂ ನಿಃಶಂಕಂ ನಿರವಧಿಸಮಾಧಿಂ ವಿಧಿರಹೋ ।
ಸುಖಂ ಶೇಷೇ ಶೇತಾಂ ಹರಿರವಿರತಂ ನೃತ್ಯತು ಹರಃ ॥
ಕೃತಂ ಪ್ರಾಯಶ್ಚಿತ್ತೈರಲಮಥ ತಪೋದಾನಯಜನೈಃ ।
ಸವಿತ್ರೀ ಕಾಮಾನಾಂ ಯದಿ ಜಗತಿ ಜಾಗರ್ತಿ ಜನನೀ ॥ ೨೩ ॥

ಭೋ ಜನನಿ, ಜಗತಿ ಕಾಮಾನಾಂ ಸವಿತ್ರೀ ಯದಿ ಜಾಗರ್ತಿ, ವಿಧಿಃ ನಿರವಧಿ ಸಮಾಧಿಂ ನಿಃಶಂಕಂ ವಿಧತ್ತಾಮ್. ಹರಿಃ ಶೇಷೇ ಸುಖಂ ಶೇತಾಂ ಹರಃ ಅವಿರತಂ ನೃತ್ಯತು. ಪ್ರಾಯಶ್ಚಿತ್ತೈಃಕೃತಮ್. ಅಥ ತಪೋದಾನಯಜನೈಃ ಅಲಮ್, ಅಹೋ!

ಎಲೌ ಜಗನ್ಮಾತೆಯೆ, ಜಗತ್ತಿನ ಮನೋರಥವನ್ನು ಪೂರ್ಣಮಾಡಲು ಸಮರ್ಥಳಾದ ನೀನು ಜಾಗೃತಳಾಗಿದ್ದರೆ ಸಾಕು; ಬ್ರಹ್ಮದೇವನು ಅಮರ್ಯಾದವಾದ ಸಮಾಧಿ ಸುಖವನ್ನು ನಿಃಶಂಕ ಮನಸ್ಸಿನಿಂದನುಭವಿಸಲಿ. ಪ್ರಾಯಶ್ಚಿತ್ತದ ಅವಶ್ಯಕತೆಯಿಲ್ಲ. ತಪಸ್ಸು ದಾನ, ಆರಾಧನ ( ಪರಲೋಕ ಪ್ರಾಪ್ತಿಗಾಗಿ ) ಮೊದಲಾದವುಗಳು ಬೇಕಾಗಿಲ್ಲ. ಇಂಥ ಆಶ್ಚರ್ಯ ಕಾರಕವು !

ಅನಾಥಃ ಸೌಹಾರ್ದ್ರಾಂ ವಿಗಲಿತಗತಿಃ ಪುಣ್ಯಗತಿದಾಂ |
ಪತನ್ವಿಶ್ವೋದ್ಧರ್ತ್ರೀಂಗದವಿಗಲಿತಃ ಸಿದ್ಧಭಿಷಜಂ ||
ಸುಧಾಸಿಂಧುಂ ತೃಷ್ಣಾಕುಲಿತಹೃದಯೋಮಾತರಮಯಂ |
ಶಿಶುಃ ಸಂಪ್ರಾಪ್ತಸ್ತ್ವಾಮಹಮಿಹ ವಿದಧ್ಯಾಃ ಸಮುಚಿತಮ್ || ೨೪ ||

( ಭೋ ಗಂಗೇ, ) ಅನಾಥಃ ವಿಗಲಿತಗತಿಃ ಪತನ್ ಗದವಿಗಲಿತಃ ತೃಷ್ಣಾ ಕುಲಿತ ಹೃದಯಃ ಅಯಂ ಅಹಂ ಶಿಶುಃ, ಸೌಹಾರ್ದ್ರಾಂ ಪುಣ್ಯಗತಿದಾಂ ವಿಶ್ವೋದ್ಧರ್ತ್ರೀಂ ಸಿದ್ಧಭಿಷಜಂ ಸುಧಾಸಿಂಧುಂ ತ್ವಾಂ ಮಾತರಂ ಸಂಪ್ರಾಪ್ತಃ ಇಹ ತ್ವಂ ಸಮುಚಿತಂ ವಿದಧ್ಯಾಃ

ಎಲಾ ಭಾಗೀರಥಿ, ನಾನು ಅನಾಥನೂ, ಗತಿರಹಿತನೂ, ಪತಿತನೂ, ರೋಗಗ್ರಸ್ತನೂ, ತೃಷಾಕ್ರಾಂತನೂ ಆದ ಬಾಲಕನು; ನೀನು ಸ್ನೆಹಭರಿತಳೂ, ಉತ್ತಮ ಗತಿಯನ್ನು ಕೊಡತಕ್ಕವಳೂ, ಜಗತ್ತನ್ನುದ್ಧರಿಸುವವಳೂ, ರೋಗಗ್ರಸ್ತರನ್ನು ನೆಟ್ಟಗೆ ಮಾಡುವ ವೈದ್ಯಳೂ, ಅಮೃತ ಸಿಂಧುವೂ ಆದ ಜನನಿಯು, ಆದುದರಿಂದ ನಾನು ನಿನ್ನನ್ನು ಮರೆಹೊಕ್ಕಿದ್ದೇನೆ. ಈ ಸಮಯದಲ್ಲಿ ನೀನು ನನಗೆ ಯೋಗ್ಯವಾದುದನ್ನು ( ಶರಣಾಗತರಕ್ಷಣೆ ) ಮಾಡು.

ವಿಲೀನೋ ವೈ ವೈವಸ್ವತನಗರಕೋಲಾಹಲಭರೋ ।
ಗತಾದೂತಾದೂರಂ ಕ್ವಚಿದಪಿ ಪರೇತಾನ್ಮೃಗಯಿತುಂ ||
ವಿಮಾನಾನಾಂ ವ್ರಾತೋ ವಿದಲಯತಿ ವೀಥೀರ್ದಿವಿಷದಾಂ |
ಕಥಾ ತೇ ಕಲ್ಯಾಣೀ ಯದವಧಿ ಮಹೀ ಮಂಡಲ ಮಗಾತ್ || ೨೫ ||

( ಭೋ ಜನನಿ, ) ಯದವಧಿ ತೇ ಕಲ್ಯಾಣೀ ಕಥಾ ಮಹೀಮಂಡಲಂ ಅಗಾತ್ ( ತದಾರಭ್ಯ ) ವೈವಸ್ವತನಗರಕೋಲಾಹಲಭರಃ ವೈ ವಿಲೀನಃ ( ಅಭೂತ್ ). ದೂತಾಃ ಅಪಿಕ್ವಚಿತ್ ದೂರಂ ಪರೇತಾನ್ ಮೃಗಯಿತುಂ ಗತಾಃ ವಿಮಾನಾನಾಂ ವ್ರಾತಃ ದಿವಿಷದಾಂ ವೀಥೀಃ ವಿದಲಯತಿ.

ಎಲೌ ಮಾತೆಯೆ, ನಿನ್ನ ಕಲ್ಯಾಣಕಾರಕ ಕಥೆಯು ಭೂಮಂಡಲವಲ್ಲಿ ಪ್ರಾಪ್ತವಾದಂದಿನಿಂದ ಯಮನ ನಗರದ ದುಃಖಿತ ( ಮಾಡಿದಪಾಪಗಳಿಂದ ಕಷ್ಟಪಡುತ್ತಲಿರುವ )

ಜನರ ಗೋಳು ಸಂಪೂರ್ಣವಾಗಿ ಇಲ್ಲದಂತಾಯಿತು. ಅಂದಿನಿಂದ ಯಮದೂತರಾದ ರೋ ದೂರದೇಶದಲ್ಲಿ ( ನಿನ್ನಿಂದ ಬಹುದೂರದಲ್ಲಿದ್ದುದರಿಂದ ನಿನ್ನ ಮಾಹಾತ್ಮೆಯನ್ನರಿಯದೆ ) ಸಾಯುತ್ತಿರುವ ಜನರ ಶೋಧಕ್ಕಾಗಿ ಅಡ್ಡಾಡುತ್ತಲಿದ್ದಾರೆ; ಮತ್ತು ಅಂದಿನಿಂದ ನಿನ್ನ ಕೃಪಾಪ್ರಸಾದವನ್ನು ಹೊಂದಿ, ದಿವ್ಯದೇಹವನ್ನು ಧರಿಸಿದ ಜನರು ವಿಮಾನಗಳಲ್ಲಿ ಕಳಿತು ಸ್ವರ್ಗಲೋಕಕ್ಕೆ ಹೋಗುತಲಿದ್ದಾರೆ. ಈ ವಿಮಾನಗಳು ದೇವತೆಗಳ ಸಂಚಾರಕ್ಕೆ ತಡೆಯನ್ನುಂಟುಮಾಡುತ್ತಿರುವವು.

ಸ್ಫುರತ್ಕಾಮಕ್ರೋಧ ಪ್ರಬಲತರಸಂಜಾತಜಟಿಲ- |
ಜ್ವಲಜ್ಜ್ವಾಲಾಜಾಲಜ್ವಲಿತವಪುಷಾಂ ನಃ ಪ್ರತಿದಿನಮ್ ||
ಹರಂತಾಂ ಸಂತಾಪಂ ಕಮಪಿ ಮರುದುಲ್ಲಾಸಲಹರೀ |
ಛಟಾಚಂಚತ್ಪಾಥಃ ಕಣಸರಣಯೋ ದಿವ್ಯಸರಿತಃ || ೨೬ ||

( ಹೇ ಮಾತಃ ) ದಿವ್ಯಸರಿತಃ ಮರುದುಲ್ಲಾಸಲಹರೀ ಛಟಾಚಂಚತ್ಪಾಥಃ ಕಣಸರಣಯಃ ಪ್ರತಿದಿನಂ ಸ್ಫುರತ್ಕಾಮಕ್ರೋಧ ಪ್ರಬಲತರಸಂಜಾತ ಜಟಿಲಜ್ವರ ಜ್ವಾಲಾಜಾಲಜ್ವಲಿತ ವಪುಷಾಂ ನಃ ಕಂ ಅಪಿ ಸಂತಾಪಂ ಹರಂತಾಮ್.

ಎಲೌ ಮಾತೆಯೆ, ಪ್ರದಿವಸ ಹೆಚ್ಚುತ್ತಲಿರುವ ಕಾಮ-ಕ್ರೋಧಾದಿ ವಿಕಾರಗಳಿಂದ ಪ್ರದೀಪ್ತವಾದ ಸಂಸಾರ-ಜ್ವರ-ಜ್ವಾಲೆಯಿಂದ ನಾನು ಬೆಂದುಹೋಗಿದ್ದೇನೆ. ದೇವನದಿಯಾದ ನಿನ್ನ ಗಾಳಿಯಿಂದೆದ್ದ ಲಹರಿಗಳಿಂದ ಹಾರಾಡುತ್ತಲಿರುವ ಜಲ-ತುಷಾರ-ಕಣಗಳ ಸಮೂಹವು, ಔಷಧ ಸೇವನೆಯಿಂದ ಪರಿಹರಿಸಲಿಕ್ಕೆ ಬಾರದ ಈ ಸಂಸಾರರೂಪವಾದ ಸಂತಾಪವನ್ನು ನಾಶಮಾಡಲಿ.

ಇದಂ ಹಿ ಬ್ರಹ್ಮಾಂಡಂ ಸಕಲಭುವನಾಭೋಗಭವನಂ ।
ತರಂಗೈರ್ಯಸ್ಯಾಂತರ್ಲಠತಿ ಪರಿತಸ್ತಿಂದುಕಮಿವ ॥
ಸ ಏಷಃ ಶ್ರೀಕಂಠ-ಪ್ರವಿತತಜಟಾಜೂಟಜಟಿಲೋ ।
ಜಲಾನಾಂ ಸಂಘಾತಸ್ತವ ಜನನಿ ತಾಪಂ ಹರತು ನಃ ॥ ೨೭ ॥

ಹೇ ಜನನಿ, ಯಸ್ಯಾಂತಃ ಸಕಲಭುವನಾಭೋಗಭವನಂ ಇದಂ ಬ್ರಹ್ಮಾಂಡ ತರಂಗೈಃ ತಿಂದುಕಮಿವ ಹಿ ಪರಿತಃ ಲುಠತಿ ಸಃ ಏಷಃ ಶ್ರೀಕಂಠಪ್ರವಿತತ ಜಟಾಜೂಟ-ಜಟಿಲಃ ತವ ಜಲಾನಾಂ ಸಂಘಾತಃ ನಃ ತಾಪಂ ಹರತು.

ಎಲೌ ತಾಯಿಯೇ, ಚತುರ್ದಶಲೋಕಗಳನ್ನೊಳಕೊಂಡ ಈ ಅಪರಿಮಿತ ಬ್ರಹ್ಮಾಂಡವು, ವಾಯುವಿನ ಹೊಡತದಿಂದ ಅಲ್ಲಾಡುತ್ತಲಿರುವ ತುಮರಿಯ ಹಣ್ಣಿ

ನಂತೆ, ನಿನ್ನ ಪ್ರವಾಹದಲ್ಲಿ ಹೊಯ್ದಾಡುತ್ತಲಿವೆ. ಶಿವನ ವಿಸ್ತೃತವಾದ ಜಟಾಜೂಟದಲ್ಲಿರುವ ಇಂಥ ನಿನ್ನ ಜಲಪ್ರವಾಹವು ನಮ್ಮ ತಾಪಗಳನ್ನು ನಾಶಮಾಡಲಿ.

ತ್ರಪಂತೇ ತೀರ್ಥಾನಿ ತ್ವರಿತಮಿಹ ಯಸ್ಯೋದ್ಧೃತಿವಿಧೌ ।
ಕರಂ ಕರ್ಣೇ ಕುರ್ವಂತ್ಯಪಿ ಕಿಲ ಕಪಾಲಿಪ್ರಭೃತಯಃ ॥
ಇಮಂ ತ್ವಂ ಮಾಮಂಬ ತ್ವಮಿಯ ಮನುಕಂಪಾರ್ದ್ರಹೃದಯೇ ।
ಪುನಾನಾ ಸರ್ವೇಷಾಮಘಮಥನದರ್ಪಂ ದಲಯಸಿ ॥ ೨೮ ॥

ಹೇ ಅನುಕಂಪಾ ರ್ದ್ರಹೃದಯೇ ಅಂಬ, ಇಹ ಯಸ್ಯ ಉದ್ಧೃತಿವಿಧೌ ತೀರ್ಥಾನಿ ತ್ವರಿತಂ ತ್ರಪಂತೇ ಕಪಾಲಿಪ್ರಭೃತಯಃ ಅಪಿ ಕಿಲ ಕರ್ಣೇ ಕರಂ ಕುರ್ವಂತಿ ತಂ ಇಮಂ ಮಾಂ ಪುನಾನಾ ಇಯಂ ತ್ವಂ ಸರ್ವೇಷಾಂ ಅಘಮಥನದರ್ಪಂ ದಲಯಸಿ.

ಎಲೌ ಸದಯಹೃದಯಳಾದ ತಾಯಿಯೇ, ನಾನು ಉದ್ಧಾರ ಹೊಂದಬೇಕೆಂಬ ಇಚ್ಛೆಯಿಂದ ಅನೇಕ ತೀರ್ಥಗಳನ್ನಲೆದೆನು; ಆದರೆ ಆ ತೀರ್ಥಗಳು ನನ್ನನ್ನು ನೋಡಿದೊಡನೆಯೆ (ಉದ್ಧರಿಸಲಸಮರ್ಥವಾದುದರಿಂದ) ಲಜ್ಜಿತವಾದವು. ಶ್ರೀ ಶಂಕರಾದಿ ದೇವತೆಗಳೂ ಕೂಡ (ನನ್ನ ಉದ್ಧಾರದ ಮಾರ್ಗವನ್ನು ತಿಳಿಯದವರಾಗಿ) ಕಿವಿಯಮೇಲೆ ಕೈಯಿಟ್ಟುಕೊಳ್ಳುತ್ತಿರುವರು. ಇಂಥ ಮಹಾಪಾತಕನಾದ ನನ್ನನ್ನು ನೀನು ಉದ್ಧರಿಸಿದೆಯಾದರೆ, ಆ ಯಾವತ್ತು ತೀರ್ಥಗಳ ಮತ್ತು ದೇವತೆಗಳ (ಪತಿತೋದ್ಧಾರದ ವಿಷಯವಾಗಿರುವ) ಗರ್ವವನ್ನು ನಾಶಮಾಡಿದಂತೆ ಆಗುವದು.

ಸ್ವಪಾಕಾನಾಂ ವ್ರಾತ್ಯೈರಮಿತವಿಚಿಕಿತ್ಸಾ ವಿಚಲಿತೈಃ ।
ವಿಮುಕ್ತಾನಾಮೇಕಂ ಕಿಲ ಸದನಮೇನಃ ಪರಿಷದಾಮ್ ॥
ಅಹೋ ಮಾಮುದ್ಧರ್ತುಂ ಜನನಿ ಘಟಯಂತ್ಯಾಃ ಪರಿಕರಂ ।
ತಪಶ್ಲಾಘಾಂ ಕರ್ತುಂ ಕಥಮಿವ ಸಮರ್ಥೋ ನರಪಶುಃ ॥ ೨೯ ॥

ಭೋ ಜನನಿ, ಅಮಿತವಿಚಿಕಿತ್ಸಾ ವಿಚಲಿತೈಃ ಸ್ವಪಾಕಾನಾಂವ್ರಾತ್ಯೈಃ ವಿಮುಕ್ತಾನಾಂ ಏನಃ ಪರಿಷದಾಂ ಕಿಲ ಏಕಂ ಸದನಂ ಮಾಂ ಉದ್ಧರ್ತುಂ ಪರಿಕರಂ ಘಟಯಂತ್ಯಾ: ತವ ಶ್ಲಾಘಾಂ ಕರ್ತುಂ ನರಪಶುಃ ಇವ (ಅಹಮ್) ಅಹೋ ಕಥಮ್ ಸಮರ್ಥ: ?

ಎಲೌ ಮಾತೆಯೆ, ಮಹಾಚಾಂಡಾಲರು ಕೂಡ ಇವನ್ನೆಂದೂ ಆಚರಿಸಲಾಗದೆಂದು ನಿಷ್ಕರ್ಷಿಸಿ ಬಿಟ್ಟಂಥ ಅನೇಕ ಪಾತಕಗಳನ್ನು ನಾನು ಆಚರಿಸಿದೆನು:

ಇಂಥ ಮಹಾಪಾತಕಗಳಿಗೆ ಆವಾಸಸ್ಥಾನನಾದ ನನ್ನನ್ನುದ್ಧರಿಸಲು ಸಿದ್ಧಳಾದ ನಿನ್ನನ್ನು ಸ್ತುತಿಸಲು, ಮನುಷ್ಯರಲ್ಲಿ ಪಶುಸಮಾನನಾದ ನಾನು ಹೇಗೆ ಸಮರ್ಥನಾದೇನು?

ನ ಕೋಽಪ್ಯೇತಾವಂತಂ ಖಲು ಸಮಯಮಾರಭ್ಯ ಮಿಲಿತೋ ।
ಯದುದ್ಧಾರಾದಾರಾದ್ಭವತಿ ಜಗತೋ ವಿಸ್ಮಯಭರಃ ॥
ಇತೀಮಾಮೀಹಾಂ ತೇ ಮನಸಿ ಚಿರಕಾಲಂ ಸ್ಥಿತವತೀಂ ।
ಮಯಂ ಸಂಪ್ರಾಪ್ತೋಽಹಂ ಸಫಲಯಿತುಮಂಬ ಪ್ರಣಯ ನಃ ॥ ೨೦ ॥

ಭೋ ಅಂಬ, ಏತಾವಂತಂ ಸಮಯಂ ಆರಂಭ್ಯ (ಮಮ ಸದೃಶಃ) ಕಃ ಅಪಿ ಖಲು ನ ಮಿಲಿತಃ; ಯದುದ್ಧಾರಾತ್ ಆರಾತ್ ಜಗತಃ ವಿಸ್ಮಯಭರಃ ಭವತಿ ಇತಿ ಇಮಾಂ ತೇ ಮನಸಿ ಚಿರಕಾಲಂ ಸ್ಥಿತವತೀಂ ಈಹಾಂ ಸಫಲಯಿತುಂ ಅಯಂ ಅಹಂ ಸಂಪ್ರಾಪ್ತಃ (ಅತಃ ತ್ವಂ) ನಃ ಪ್ರಣಯ.

ಎಲೌ ತಾಯಿಯೆ, ಯಾವ ಪಾಪಿಯನ್ನು ಉದ್ಧರಿಸಿದೆನಾದರೆ ಜಗತ್ತಿನ ಜನರೆಲ್ಲ ಆಶ್ಚರ್ಯಚಕಿತತರಾದಾರು? ಏಕವಾಕ್ಯದಿಂದ ನನ್ನನ್ನು ಕೊಂಡಾಡಿಯಾರು? ಎಂಬ ಇಚ್ಛೆಯು ನಿನ್ನ ಮನಸ್ಸಿನಲ್ಲಿ ಬಹು ದಿವಸಗಳಿಂದ ಉಂಟಾಗಿದ್ದಿತು; ಆದರೆ ಈವರೆಗೆ ನಿನಗೆ ಇಂಥ ಪಾತಕಿಗಳಾರೂ ದೊರೆತಿರಲಿಲ್ಲ- ಈಗ ನಾನು ನಿನ್ನ ಬಳಿಗೆ ಬಂದಿದ್ದೇನೆ. ನೀನು ನನ್ನನ್ನುದ್ಧರಿಸಿ, ನಿನ್ನ ಬಹುದಿವಸಗಳ ಆಕಾಂಕ್ಷೆಯನ್ನು ಪೂರ್ಣಮಾಡಿಕೊಳ್ಳು.

ಶ್ವವೃತ್ತಿ ವ್ಯಾಸಂಗೋಽನಿಯತಮಥ ಮಿಥ್ಯಾಪ್ರಲಪನಂ ।
ಕುತರ್ಕೇಷ್ವಭ್ಯಾಸಃ ಸತತಪರಪೈಶೂನ್ಯಮನನಮ್ ॥
ಅಪಿ ಶ್ರಾವಂ ಶ್ರಾವಂ ಮಮ ತು ಪುನರೇವಂ ಗುಣಗಣಾ ।
ನೃತೇ ತ್ವತ್ಕೋ ನಾಮಕ್ಷಣಮಪಿ ನಿರೀಕ್ಷೇತ ವದನಮ್ ॥ ೨೦ ॥

(ಭೋ ಮಾತಃ) ಶ್ವವೃತ್ತಿವ್ಯಾಸಂಗಃ, ನಿಯತಂ ಮಿಥ್ಯಾಪ್ರಲಪನಂ, ಕುತರ್ಕೇಷು ಅಭ್ಯಾಸಃ ಅಥ ಸತತ ಪರಪೈಶೂನ್ಯಮನನಮ್. ಏವಂ ಮಮ ತು ಗುಣಗಣಾನ್ ಪುನರಪಿ ಶ್ರಾವಂ ಶ್ರಾವಂ ತ್ವದೃತೇ ಕಃ ನಾಮ ಕ್ಷಣಮಪಿ (ಮಮ) ವದನಂ ನಿರೀಕ್ಷೇತ?

ಎಲೌ ಜನನಿಯೆ, ನಾಯಿಯಂತೆ ಅತ್ತಿತ್ತ ತಿರುಗಾಡಿ ಹೊಟ್ಟೆ ತುಂಬಿಸಿಕೊಳ್ಳೋಣ, ಯಾವಾಗಲೂ ಸುಳ್ಳು ಮಾತಾಡೋಣ, ಕುತರ್ಕಗಳಲ್ಲಿ ಕಾಲಕಳೆಯೋ

ಣ, ಮೇಲಿಂದಮೇಲೆ ಎರಡನೆಯವರ ನಿಂದ್ಯ ಕೆಲಸಗಳನ್ನು ಚಿಂತಿಸೋಣ ಇವೇ ನಾನು ಆಚರಿಸಿದ ಕೆಲಸಗಳು. ಇಂಥ ನನ್ನ ದುರ್ಗುಣಗಳನ್ನು ಬಹುಕಾಲದವರೆಗೆ ಕೇಳಿದಬಳಿಕ, ನಿನ್ನ ಹೊರತು ಇತರರಾರಾದರೂ ಒಂದು ಕ್ಷಣಕಾಲದವುಟ್ಟಿಗಾದರೂ ನನ್ನ ಮುಖದಕಡೆಗೆ ನೋಡಬಹುದೇನು? (ಎಂದೂ ಇಲ್ಲ.)

(ಈ ನೂರು ಶ್ಲೋಕಗಳಲ್ಲಿ ಕವಿಯು ಈತನು ಈವರೆಗೆ ಆಚರಿಸಿದ ಕುಕರ್ಮಗಳಿಗಾಗಿ ಪಶ್ಚಾತ್ತಾಪವನ್ನು ಹೊಂದಿದುದನ್ನು ಹೇಳಿಕೊಂಡಿದ್ದಾನೆ. ಮನುಷ್ಯನು ಅಜ್ಞಾನವಶದಿಂದಾಗಲಿ, ವಿಕಾರಗಳ ಬಲೆಯಲ್ಲಿ ಸಿಕ್ಕಾಗಲಿ ಕೆಟ್ಟ ಕೆಲಸಗಳನ್ನು ಮಾಡುತ್ತಿರುವದುಂಟು. ಇಂಥವರು ಕೇವಲ ನರಕಭೋಗಿಗಳೇ ಆಗುವರೆಂದು ಹೇಳಲಿಕ್ಕೆ ಬರುವಂತಿಲ್ಲ. ಇವರು ನಿಜವಾದ ಪಶ್ಚಾತ್ತಾಪವುಂಟಾದದ್ದಾದರೆ ಆ ಕುಕರ್ಮಗಳನ್ನು ತ್ಯಜಿಸಿ ಏಕೋಭಾವದಿಂದ ದೇವರನ್ನು ಮರೆಹೊಕ್ಕರೆ ನರಕಯಾತನೆಯಿಂದ ಪಾರಾಗಿ ಮುಕ್ತಿಯನ್ನು ಹೊಂದಬಹುದಾಗಿದೆ. ಅಂತೆಯೇ ಜಗನ್ನಾಥ ಪಂಡಿತನು ಗಂಗಾಮಾತೆಯಿಂದುದ್ಧಾರನಾಗಿದ್ದಾನೆ.)

ವಿಶಾಲಾಭ್ಯಾಮಾಭ್ಯಾಂ ಕಿಮಿಹ ನಯನಾಭ್ಯಾಂ ಖಲುಫಲಂ।
ನ ಯಾಭ್ಯಾ ಮಾಲೀಢಾ ಪರಮರಮಣೀಯಾ ತವತನುಃ ||
ಅಯಂ ಹಿ ನ್ಯಕ್ಕಾರೋ ಜನನಿ ಮನುಜಸ್ಯ ಶ್ರವಣಯೋಃ |
ಯಯೋರ್ನಾಂತರ್ಯಾತಸ್ತವ ಜನನಿ ಲೀಲಾಕಲಕಲಃ ॥ ೩೧ ॥

ಭೋ ಜನನಿ, ಯಾಭ್ಯಾಂ ನಯನಾಭ್ಯಾಂ ತವಪರಮರಮಣೀಯಾತನುಃ ನ ಆಲೀಢಾ. ಆಭ್ಯಾಂ ವಿಶಾಲಾಭ್ಯಾಂ ಖಲು (ನಯನಾಭ್ಯಾಂ) ಕಿಂ ಫಲಂ? ಯಯೋಃ ಶ್ರವಣಯೋಃ ಅಂತಃ ತವ ಲಹರೀಲೀಲಾಕಲಕಲಃ ನ ಯಾತಃ ತಯೋಃ (ಅಪಿ ಕಿಂ ಫಲಂ ಅಸ್ತಿ)? ಅಯಂ ನ್ಯಕ್ಕಾರಃ ಮನುಜಸ್ಯ ಹಿ.

ಎಲೌ ತಾಯಿಯೆ, ನಿನ್ನ ಅತಿ ಸುಂದರ ಮೂರ್ತಿಯನ್ನು ನೋಡದ ಅಕರ್ಣ ವಿಶಾಲವಾದ ಕಣ್ಣುಗಳಿಂದ ಉಪಯೋಗ ವೇನು? ಅವು ಇದ್ದೂ ಇಲ್ಲದಂತೆಯೇ ಸರಿ. ನಿನ್ನ ಲಹರಿಗಳ ಕಲಕಲ ಧ್ವನಿಯನ್ನು ಕೇಳದ ಕಿವಿಗಳಿಂದ ಫಲವೇನು? ಅವು ವ್ಯರ್ಥ ವಾದವುಗಳು. ಈ ಮೇರೆಗೆ ಇಂದ್ರಿಯಗಳನ್ನು ಸರಿಯಾಗಿ ಉಪಯೋಗ ಮಾಡಿಕೊಳ್ಳದಿದ್ದ ಮನುಷ್ಯನಿಗೆ ಧಿಕ್ಕಾರವಿರಲಿ.

ವಿಮಾನೈಃ ಸ್ವಚ್ಛಂದಂ ಸುರಪುರಮಯಂತೇ ಸುಕೃತಿನಃ।
ಪತಂತಿ ದ್ರಾಕ್ ಪಾಪಾಜನನಿ ನರಕಾಂತಃ ಪರವಶಾಃ ॥
ವಿಭಾಗೋಽಯಂ ತಸ್ಮಿನ್ನಶುಭಮಯಮೂರ್ತೌ ಜನಪದೇ।
ನ ಯತ್ರ ತ್ವಲ್ಲೀಲಾದಲಿತಮನುಜಾಶೇಷ ಕಲುಷಾ ॥ ೩೨ ॥

ಭೋ ಜನನಿ, ಸುಕೃತಿನಃ ವಿಮಾನೈಃ ಸುರಪುರಂ ಸ್ವಚ್ಛಂದಂ ಆಯಾಂತೀ. ಪಾಪಾಃ ಪರವಶಾಃ (ಸಂತಃ) ನರಕಾಂತಃ ದ್ರಾಕ್ ಪತಂತಿ. ಅಯಂ ವಿಭಾಗಃ ಯತ್ರ ಲೀಲಾದಲಿತಮನುಜಾಶೇಷಕಲುಷಾ ತ್ವಂ ನ (ಅಸಿ) ತಸ್ಮಿನ್ ಅಶುಭಮಯಮೂರ್ತೌ ಜನಪದೇ (ಅಸ್ತು)

ಎಲೌ ಜನನಿಯೆ, ಪುಣ್ಯವಂತರು ವಿಮಾನದಲ್ಲಿ ಕುಳಿತು ಸ್ವರ್ಗಕ್ಕೆ ಸ್ವಚ್ಛಂದದಿಂದ ಹೋಗುತ್ತಾರೆ; ಪಾಪಾತ್ಮರು ಯಮ-ದೂತರ ಸ್ವಾಧೀನವಾಗಿ ಕೂಡಲೇ ನರಕದಲ್ಲಿ ಬೀಳುತ್ತಾರೆ ಈ ವ್ಯವಸ್ಥೆಯು ಲೀಲಾಮಾತ್ರದಿಂದ ಜನರ ಸಕಲಪಾಪಗಳನ್ನು ಪರಿಹರಿಸುವ ನೀನಿಲ್ಲದ ಪಾಪರೂಪೀ ಪ್ರದೇಶದಲ್ಲಿ ಮಾತ್ರ ಇರಲಿ. (ನೀನಿದ್ದ ಪ್ರದೇಶದ ಯಾವತ್ತೂ ಜನರು ಸ್ವರ್ಗಕ್ಕೆ ಹೋಗಲೇ ಬೇಕು.)

ಅಪಿ ಘ್ನಂತೋ ವಿಪ್ರಾನವಿರತಮುಶಂತೋ ಗುರುಸತೀಃ ।
ಪಿಬಂತೋ ಮೈರೇಯಂ ಪುನರಪಿ ಹರಂತಶ್ಚ ಕನಕಮ್ ॥
ವಿಹಾಯ ತ್ವಯ್ಯಂತೇ ತನುಮತನುದಾನಾಧ್ವರಜುಷಾ ।
ಮುಪರ್ಯಂಬ ಕ್ರೀಡಂತ್ಯಖಿಲಸುರಸಂಭಾವಿತಪದಾಃ ॥ ೩೪ ॥

ಭೋ ಅಂಬ, ವಿಪ್ರಾನ್ ಅವಿರತಂ ಘ್ನಂತಃ ಅಪಿ, ಗುರುಸತೀಃ ಉಶಂತಃ, ಮೈರೇಯಂ ಪಿಬಂತಃ, ಪುನಃ ಕನಕಂ ಹರಂತಃ ಅಪಿ ಅಂತೇ ತ್ವಯಿ ತನುಂ ವಿಹಾಯ, ಅಖಿಲಸುರಸಂಭಾವಿತಪದಾಃ (ಸಂತಃ) ಅತನುದಾನಾಧ್ವರಜುಷಾಂ ಉಪರಿ ಕ್ರೀಡಂತಿ.

ಎಲೌ ತಾಯಿಯೆ, ಸತತವಾಗಿ ಬ್ರಹ್ಮಹತ್ಯೆಯನ್ನು ಮಾಡಿದವರೂ, ಗುರುಪತ್ನಿಯನ್ನು ಇಚ್ಛಿಸಿದವರೂ, ಮದ್ಯ ಪ್ರಾಶನ ಮಾಡಿದವರೂ, ಬಂಗಾರವನ್ನು ಕದ್ದವರೂ ಆದ ಮಹಾಪಾಪಿಗಳು ಸಹ ಅಂತ್ಯಕಾಲದಲ್ಲಿ ನಿನ್ನಲ್ಲಿ ತಮ್ಮ ದೇಹವನ್ನಿರಿಸಿದವರಾದರೆ, ಸಕಲದೇವತೆಗಳಿಂದ ಮರ್ಯಾದೆಯನ್ನು ಹೊಂದಿದವರಾಗಿ, ಮಹಾದಾನಗಳನ್ನೂ ಯಜ್ಞಗಳನ್ನೂ ಮಾಡಿದವರಿಗಿಂತಲೂ ಉತ್ತಮ ಗತಿಯನ್ನು ಪಡೆದು, ಅಲ್ಲಿ ಕ್ರೀಡಿಸುತ್ತಾರೆ.

ಅಲಭ್ಯಂ ಸೌರಭ್ಯಂ ಹರತಿ ನಿಯತಂ ಯಃ ಸುಮನಸಾಂ ।
ಕ್ಷಣಾದೇವ ಪ್ರಾಣಾನಪಿ ವಿರಹಶಸ್ತ್ರ ಕ್ಷತಭೃತಾಮ್ ॥
ತ್ವದೀಯಾನಾಂ ಲೀಲಾಚ್ಚಲಿತ ಲಹರೀಣಾಂ ವ್ಯತಿಕರಾತ್ ।
ಪುನೀತೇ ಸೋಪಿ ದ್ರಾಗಹಹ ಪವಮಾನಸ್ತ್ರಿಭುವನಂ ॥ ೩೫ ॥

( ಭೋ ಅಂಬ, ) ಯಃ ಸುಮನಸಾಂ ಅಲಭ್ಯಂ ಸತತಂ ಸೌರಭ್ಯಂ ಹರತಿ. ವಿರಹ ಶಸ್ತ್ರಕ್ಷತಹೃದಾಮ್ ಪ್ರಾಣಾನ್ ಅಪಿ ಕ್ಷಣಾತ್ ಏವ ( ಹರತಿ). ಸಃ ಪವಮಾನಃ ಅಪಿ, - ತ್ವದೀಯಾನಾಂ ಲೀಲಾಚಲಿತಲಹರೀಣಾಂ ಸ್ಪೃಶಿಕರಾತ್ ದ್ರಾಕ್ ತ್ರಿಭುವನಂ ಪುನೀತೇ. ಅಹಹ!

ಎಲೌ ಜನನಿಯೇ, ಹೂಗಳ ಅಲಭ್ಯವಾದ ಸುಗಂಧವನ್ನು ನಿರಂತರವಾಗಿ ಹರಣ ಮಾಡುವಂಥ ಮತ್ತು ಪ್ರಿಯಜನರ ವಿಯೋಗವೆಂಬ ಶಸ್ತ್ರದಿಂದ ಭಗ್ನಹೃದಯರಾದ ಜನರ ಪ್ರಾಣವನ್ನು ತೆಗೆದುಕೊಳ್ಳುವಂಥ ವಾಯುವು ನಿನ್ನ ತೆರೆಗಳ ಸ್ಪರ್ಶಮಾತ್ರದಿಂದ ಪವಿತ್ರವಾಗಿ, ಮೂರು ಲೋಕಗಳನ್ನು ಪಾವನ ಮಾಡುವದು ಇದೆಂಥ ಆಶ್ಚರ್ಯವು!

ಕಿಯಂತಃ ಸಂತ್ಯೇಕೇ ನಿಯತಮಿಹ ಲೋಕಾರ್ಥ ಘಟಕಾಃ ।
ಪರೇ ಪೂತಾತ್ಮನಃ ಕತಿ ಚ ಪರಲೋಕಪ್ರಣಯಿನಃ ॥
ಸುಖಂ ಶೇತೇ ಮಾತಸ್ತವ ಖಲು ಕೃಪಾತಃ ಪುನರಯಂ ।
ಜಗನ್ನಾಥಃ ಶಾಶ್ವತ್ತ್ವಯಿ ನಿಹಿತಲೋಕದ್ವಯಭರಃ ॥ ೨೬ ॥

ಭೋ ಮಾತಃ, ಕಿಯಂತಃ ಏಕೇ ಇಹ ನಿಯತಂ ಲೋಕಾರ್ಥಘಟಕಾಃ ಸಂತಿ ಚ ಪರೇ ಕತಿಪೂತಾತ್ಮನಃ ( ಸಂತಃ) ಪರಲೋಕಪ್ರಣಯಿನಃ ( ಸಂತಿ) ಅಯಂ ಜಗನ್ನಾಥಃ ಪುನಃ ತ್ವಯಿ ನಿಹಿತಲೋಕದ್ವಯಭರಃ ( ಸನ್ ) ತವಕೃಪಾತಃ ಖಲು ಶಾಶ್ವತ್ ಸುಖಂ ಶೇತೇ.

ಎಲೌ ಮಾತೆಯೆ, ಈ ಲೋಕದಲ್ಲಿರುವ ಜನರಲ್ಲಿ ಕೆಲವರು ಲೋಕಕಲ್ಯಾಣಕ್ಕಾಗಿ ಯತ್ನಿಸುತ್ತಿರುವರು; ಬೇರೆ ಕೆಲವರು ತಪಾದಿ ಸಾಧನಗಳಿಂದ ಪವಿತ್ರರಾಗಿ, ಪರಲೋಕಕ್ಕೆ ಹೋಗಲು ಪ್ರಯತ್ನ ಮಾಡುತ್ತಿರುವರು; ಆದರೆ ಈ ಜಗನ್ನಾಥ ಪಂಡಿತನು ಮಾತ್ರ ನಿನ್ನಮೇಲೆ ತನ್ನ ಇಹಪರಗಳ ಭಾರವನ್ನು ಹೊರಿಸಿ, ನಿಶ್ಚಿಂತನಾಗಿ, ನಿನ್ನ ಕೃಪೆಯಿಂದ ಸದಾ ಸುಖದಿಂದ ನಿದ್ರಿಸುತ್ತಿರುವನು.

ಭವತ್ಯಾ ಹಿ ವ್ರಾತ್ಯಾಧಮಪತಿತಯಾ ಖಂಡಪರಿಷತ್ ।
ಪರಿತ್ರಾಣಸ್ನೇಹಃ ಶ್ಲಥಯಿತುಮಶಕ್ಯಃ ಖಲು ಯಥಾ ॥
ಮಮಾಪ್ಯೇವಂ ಪ್ರೇಮಾ ದುರಿತನಿವಹೇಷ್ವಂಬ ಜಗತಿ ।
ಸ್ವಭಾವೋಽಯಂ ಸರ್ವೈರಪಿ ಖಲು ಯತೋ ದುಷ್ಪರಿಹರಃ ॥ ೨೭ ॥

ಹೇ ಅಂಬ, ವ್ರಾತ್ಯಧಮಪತಿತಯಾ ಭವತ್ಯಾ ಹಿ ಖಂಡಪರಿಷತ್ಪರಿತ್ರಾಣಸ್ನೇಹಃ ಯಥಾ ಖಲು ಶ್ಲಥಯಿತುಂ ಅಶಕ್ಯಃ; ಏವಂ ದುರಿತನಿವಹೇಷು ಮಮಾಪಿ

ಪ್ರೇಮಾ (ಅಸ್ತಿ). ಯತಃ ಜಗತಿ ಸರ್ವೈಃ ಅಪಿ ಅಯಂ ಸ್ವಭಾವೋ ದುಷ್ಪರಿಹರಃ ಖಲು.

ಎಲೌ ತಾಯಿಯೆ, ಪಾಪಿಷ್ಠರ ಪಾಪಗಳನ್ನು ನಾಶ ಮಾಡುವದರಲ್ಲಿ ನಿನಗೆ ಬಹಳ ಪ್ರೇಮವಿದೆ; ಕಾರಣ ನೀನು ಈ ಕೆಲಸವನ್ನೆಂದೂ ಬಿಡಲಾರೆ; ಯಾಕಂದರೆ ಪ್ರತಿಯೊಬ್ಬನು ತನ್ನಲ್ಲಿರುವ ಚಲೋ ಇಲ್ಲವೆ ಕೆಟ್ಟ ಸ್ವಭಾವವನ್ನು ಬಿಡುವದು ಬಹಳ ಅಶಕ್ಯವಾದ ಸಂಗತಿಯಾಗಿದೆ.

ಪ್ರದೋಷಾಂತರ್ನೃತ್ಯತ್ಪುರಮಥನಲೀಲೋದ್ಧೃತಜಟಾ ।
ತಟಾಭೋಗಪ್ರೇಂಖಲ್ಲಹರಿಭುಜಸಂತಾನ ವಿಧುತಿಃ ॥
ಬಿಲಕ್ರೋಡಕ್ರೀಡಜ್ಜಲಡಮರುಟಂಕಾರ ಸುಭಗ ।
ಸ್ತಿರೋಧತ್ತಾಂ ತಾಪಂ ತ್ರಿದಶತಟಿನೀತಾಂಡವವಿಧಿಃ ॥ ೨೮ ॥

ಪ್ರದೋಷಾಂತಃ ನೃತ್ಯತ್ಪುರಮಥನಲೀಲೋದ್ಧೃತ ಜಟಾತಟಾಭೋಗಪ್ರೇಂಖಲ್ಲಹರಿಭುಜಸಂತಾನವಿಧುತಿಃ ಬಿಲಕ್ರೋಡಕ್ರೀಡಜ್ಜಲಡಮರು ಟಂಕಾರಸುಭಗಃ ತ್ರಿದಶತಟಿನೀತಾಂಡವವಿಧಿಃ ತಾಪಂ ತಿರೋಧತ್ತಾಮ್.

ಎಲೌ ಗಂಗೆಯೆ, ಪ್ರದೋಷಸಮಯದಲ್ಲಿ ಕುಣಿದಾಡುತ್ತಿರುವ ಶ್ರೀಸಾಂಬನು ಲೀಲೆಯಿಂದ ತಲೆಯಮೇಲೆ ಹರಡಿಕೊಂಡಿರುವ ಜಡೆಯ ಆಘಾತದಿಂದ ಚಂಚಲವಾದ ಲಹರಿಗಳೆಂಬ ಕೈಗಳಿಂದ ಹಾವಭಾವ ಮಾಡುತ್ತಿರುವ, ದಂಡೆಯಲ್ಲಿದ್ದ ಬಿಲಗಳಲ್ಲಿ ನೀರು ಹೊಕ್ಕು ಉಂಟಾಗುತ್ತಿರುವ ಧ್ವನಿಯೇ ಡಮರುವಿನ ಮಧುರ ಶಬ್ದವಾಗಿರುವ ದೇವನದಿಯಾದ ನಿನ್ನ ತಾಂಡವ ನೃತ್ಯವು ನಮ್ಮ ಸಂತಾಪವನ್ನು ನಾಶ ಮಾಡಲಿ.

ಸದೈವ ತ್ವಯ್ಯೇವಾರ್ಪಿತಕುಶಲಚಿಂತಾಭರಮಿಮಂ ।
ಯದಿ ತ್ವಂ ಮಾಮಂಬ ತ್ಯಜಸಿ ಸಮಯೇಽಸ್ಮಿನ್ಸುವಿಷಮೇ ॥
ತದಾ ವಿಶ್ವಾಸೋಽಯಂ ತ್ರಿಭುವನತಲಾದಸ್ತಮಯತೇ ।
ನಿರಾಧಾರಾ ಚೇಯಂ ಭವತಿ ಖಲು ನಿರ್ವ್ಯಾಜಕರುಣಾ ॥ ೨೯ ॥

ಭೋ ಅಂಬ, ಸದಾ ಏವ ತ್ವಯಿ ಏವ ಅರ್ಪಿತಕುಶಲಚಿಂತಾಭರಂ ಇಮಂ ಮಾಂ ಅಸ್ಮಿನ್ ಸುವಿಷಮೇ ಸಮಯೇ ಯದಿ ತ್ವಂ ತ್ಯಜಸಿ ತದಾ ಅಯಂ ವಿಶ್ವಾಸಃ ತ್ರಿಭುವನತಲಾತ್ ಅಸ್ತಂ ಅಯತೇ. ಚ ಇಯಂ ನಿರ್ವ್ಯಾಜ-ಕರುಣಾ ನಿರಾಧಾರಾ ಖಲು ಭವತಿ.

ಮೂರ್ತಿಯೆ, ನಾನು ನನ್ನ ಹಿತದ ಯಾವತ್ತೂ ಭಾರವನ್ನು ಸದಾ ನಿನ್ನ ಮೇಲೆ ಹೊರಿಸಿದ್ದೇನೆ. ಈ ವೇಳೆಗೆ ನಿನ್ನನ್ನೇ ನಂಬಿದ ನನ್ನನ್ನು ಇಂಥ ವಿಷಮ ಸಮಯದಲ್ಲಿ ತ್ಯಜಿಸುವೆಯಾದಕೆ, ನಿನ್ನ ಶರಣಾಂಗತೋದ್ಧಾರಕಳೆಂಬ ಬಿರುದು ಮೂರು ಲೋಕಗಳಲ್ಲಿಯೂ ಇಲ್ಲದಂತಾಗಿ ಹೋಗುವದು; ಮತ್ತು ನಿಷ್ಕಪಟ ವೃತ್ತಿಯಿಂದ ನಮೋರುವಳೆಂಬ ಖ್ಯಾತಿಯು ನಿರಾಧಾರ ವಾಗುವದು.

ಕಪರ್ದಾದುಲ್ಲಸ್ಯ ಪ್ರಣಯಮಿಲದರ್ಧಾಂಗಯುವತೇಃ ।
ಪುರಾರೇಃ ಪ್ರೇಂಖಂತ್ಯೋ ಮೃದುಲತರ ಸೀಮಂತಸರಣಾ ॥
ಭವಾನ್ಯಾ ಸಾಪತ್ನ್ಯಸ್ಫುರಿತನಯನಂ ಕೋಮಲರುಚಾ ।
ಕರೇಣಾಕ್ಷಿಪ್ತಾಸ್ತೇ ಜನನಿ ವಿಜಯಂತಾಂ ಲಹರಯಃ ॥ ೪೦ ॥

ಭೋ ಜನನಿ, ಪ್ರಣಯಮಿಲದರ್ಧಾಂಗಯುವತೇಃ ಪುರಾರೇಃ ಕಪರ್ದಾತ್ ಉಲ್ಲಸ್ಯ ಮೃದುಲತರಸೀಮಂತಸರಣಾ ಪ್ರೇಂಖಂತ್ಯಃ ಭವಾನ್ಯಾ ಸಾಪತ್ನ್ಯಸ್ಫುರಿತ ನಯನಂ ಕೋಮಲರುಚಾಕರೇಣ ಆಕ್ಷಿಪ್ತಾಃ ತೇ ಲಹರಯಃ ವಿಜಯಂತಾಮ್.

ಎಲೌ ಜನನಿಯೆ, ಪ್ರೇಮಭರದಿಂದ ಆಲಿಂಗಿಸಿಕೊಂಡಿರುವ ಸ್ತ್ರೀಯು ಎಡ ಭಾಗದಲ್ಲಿರುವ ಶ್ರೀಶಂಕರನ ಜಟಾಜೂಟದಿಂದ ಹೊರಬಿದ್ದು ಮೃದುಲತರವಾದ ಸೀಮಂತ ಪ್ರದೇಶದಲ್ಲಿ ಸಂಚರಿಸುತ್ತಿರುವ, ಮತ್ತು ಸವತೀಮತ್ಸರಕ್ಕೊಳಗಾಗಿ ಸಿಟ್ಟಿಗೆದ್ದ ಪಾರ್ವತಿಯು ಚಂಚಲನೇತ್ರಗಳಿಂದ ನೋಡಿ ತನ್ನ ಸುಕುಮಾರ ಹಸ್ತಗಳಿಂದ ಆಕರ್ಷಿಸಿಕೊಂಡ ನಿನ್ನ ಲಹರಿಗಳು ವಿಜಯುಹೊಂದಲಿ.

ಪ್ರಪದ್ಯಂತೇ ಲೋಕಾಃ ಕತಿ ನಭವತೀ ಮತ್ರಭವತೀ- ।
ಮುಪಾಧಿಸ್ತತ್ರಾಯಂ ಸ್ಫುರತಿ ಯದಭೀಷ್ಟಂ ವಿತರಸಿ ॥
ಶಪೇ ತುಭ್ಯಂ ಮಾತರ್ಮಮ ತು ಪುನರಾತ್ಮಾ ಸುರಧುನಿ ।
ಸ್ವಭಾವಾದೇವ ತ್ವಯ್ಯಮಿತಮನುರಾಗಂ ವಿಧೃತವಾನ್ ॥ ೪೧ ॥

ಭೋ ಮಾತಃ ಸುರಧುನಿ, ಅತ್ರಭವತೀಂ ಭವತೀಂ ಕತಿಲೋಕಾಃ ನ ಪ್ರಪದ್ಯಂತೇ? ತತ್ರ ಅಯಂ ಉಪಾಧಿಃ ಸ್ಫುರತಿ; ಯತ್ (ತ್ವಂ) ಅಭೀಷ್ಟಂ ವಿತರಸಿ. ಪುನಃ ಮಮ ಆತ್ಮಾ ತು ಸ್ವಭಾವಾದೇವ ತ್ವಯಿ ಅಮಿತಂ ಅನುರಾಗಂ ವಿಧೃತವಾನ್ (ಇತಿ) ತುಭ್ಯಂ (ಅಹಂ) ಶಪೇ.

ಎಲೌ ಗಂಗಾ ಮಾತೆಯೆ, ಈ ಲೋಕದಲ್ಲಿ ಪೂಜ್ಯಳಾದ ನಿನ್ನನ್ನು ಎಷ್ಟು ಮಂದಿ ಶರಣು ಹೋಗುವದಿಲ್ಲ? ಅಸಂಖ್ಯ ಜನರು ನಿನ್ನನ್ನು ಮರೆಹೊಗುವರು;

ಯಾಕಂದರೆ ನೀನು ಯಾರಿಗೆ ಯಾವ ಇಚ್ಛೆಯಿದೆಯೋ ಅದನ್ನು ಅವರಿಗೆ ಕೊಡುತ್ತಿರುವೆ. ನಾನಂತೂ ನಿನ್ನ ವಿಷಯದಲ್ಲಿ ಸ್ವಾಭಾವಿಕವಾಗಿಯೇ ಅಪರಿಮಿತ ಪ್ರೇಮವನ್ನು ಹೊಂದಿದ್ದೇನೆ, ಇದನ್ನು ನಾನು ನಿನಗೆ ಶಪಥಪೂರ್ವಕವಾಗಿ ಹೇಳುತ್ತೇನೆ; ಕಾರಣ ನೀನು ನನ್ನ ಮನದಭೀಷ್ಟವನ್ನು ತೀವ್ರ ಪೂರ್ಣಮಾಡು.

ಲಲಾಟೆ ಯಾ ಲೋಕೈರಿಹ ಖಲು ಸಲೀಲಂ ತಿಲಕಿತಾ |
ತಮೋ ಹಂತುಂ ಧತ್ತೇ ತರುಣತರಮಾರ್ತಂಡತುಲನಾಮ್ ॥
ವಿಲುಂಪಂತೀ ಸದ್ಯೋ ವಿಧಿಲಿಖಿತದುರ್ವರ್ಣಸರಣಿಂ ।
ತ್ವದೀಯಾ ಸಾ ಮೃತ್ಸ್ನಾ ಮಮ ಹರತು ಕೃತ್ಸ್ನಾಮಪಿಶುಚಂ ॥ ೪೨ ॥

(ಭೋ ಸುರಧುನಿ,) ಯಾ ಇಹ ಲೋಕೈಃ ಲಲಾಟೇ ಸಲಿಲಂ ತಿಲಕಿತಾ (ಸತಿ) ಖಲು ತಮೋಹಂತುಂ ತರುಣತರಮಾರ್ತಂಡತುಲನಾಂ ಧತ್ತೇ. (ಚ ಯಾ) ವಿಧಿಲಿಖಿತ ದುರ್ವರ್ಣಸರಣಿಂ ಸದ್ಯಃ ವಿಲುಂಪಂತೀ ಸಾ ತ್ವದೀಯಾ ಮೃತ್ಸ್ನಾ ಮಮ ಕೃತ್ಸ್ನಾಂ ಅಪಿ ಶುಚಂ ಹರತು.

ಎಲೌ ಗಂಗೆಯೆ, ನಿನ್ನಲ್ಲಿರುವ ಮೃತ್ತಿಕೆಯನ್ನು ಜನರು ತಮ್ಮ ಹಣೆಯಲ್ಲಿ ತ್ರಿಪುಂಡ್ರರೂಪದಿಂದ ಹಚ್ಚಿಕೊಂಡಿದ್ದಾದರೆ, ಅದು ಅವರ ಪಾಪರೂಪವಾದ ಅಂಧಕಾರವನ್ನು ನಾಶ ಮಾಡುವದಕ್ಕೆ ಮಧ್ಯಾಹ್ನದ ಸೂರ್ಯನೋಪಾದಿಯಲ್ಲಿ ಉಪಯೋಗ ಬೀಳುತ್ತದೆ; ಮತ್ತು ಅದು ಬ್ರಹ್ಮದೇವನ ಪ್ರಾಣಿಮಾತ್ರರ ಹಣೆಯಲ್ಲಿ ಬರೆದ ದಾರಿದ್ರ್ಯಾದಿಗಳನ್ನು ಸೂಚಿಸುವ ದುಷ್ಟ ಅಕ್ಷರಗಳನ್ನು ಕೂಡಲೇ ಇಲ್ಲದಂತೆ ಮಾಡಿ ಬಿಡುವದು. ಇಂಥ ನಿನ್ನ ಮಣ್ಣು ನನ್ನ ಯಾವತ್ತು ಶೋಕಗಳನ್ನು ನಾಶ ಮಾಡಲಿ.



ನರಾನ್ಮೂಢಾಂಸ್ತತ್ತಜ್ಜನಪದಸಮಾಸಕ್ತಮನಸೋ ।
ಹಸಂತಃ ಸೋಲ್ಲಾಸಂ ವಿಕಚಕುಸುಮವ್ರಾತಮಿಷತಃ ॥
ಪುನಾನಾಃ ಸೌರಭ್ಯೈಃ ಸತತಮಲಿನೋ ನಿತ್ಯಮಲಿನಾನ್ |
ಸಖಾಯೋ ನಃ ಸಂತು ತ್ರಿದಶತಟಿನೀತೀರತರವಃ ॥ ೪೩ ॥

ತತ್ತಜ್ಜನಪದಸಮಾಸಕ್ತಮನಸಃ ಮೂಢಾನ್ ನರಾನ್ ವಿಕಚಕುಸುಮವ್ರಾತಮಿಷತಃ ಸೋಲ್ಲಾಸಂ ಹಸಂತಃ, ನಿತ್ಯಮಲಿನಾನ್ ಅಲಿನಃ ಸೌರಭ್ಯೈಃ ಸತತಂ ಪುನಾನಾಃ ತ್ರಿದಶತಟಿನೀತೀರತರವಃ ನಃ ಸಖಾಯಃ ಸಂತು.

ಎಲೌ ಭಾಗೀರಥಿಯೆ, ನಿನ್ನ ತೀರದಲ್ಲಿರುವ ವೃಕ್ಷಗಳು, ನೀನು ಪ್ರವಹಿಸದಿರುವ ಪ್ರದೇಶದಲ್ಲಿ ಆಸಕ್ತ ಚಿತ್ತದಿಂದ ವಾಸಿಸುತ್ತಿರುವ ಜನರನ್ನು ನೋಡಿ, ತಮ್ಮ

ಅರಳಿದ ಹೂಗಳ ಮುಖಾಂತರವಾಗಿ ಉಪಹಾಸ ಮಾಡುತ್ತಿರುವವು; ಮತ್ತು ಜನ್ಮತಃ ಮಲಿನ (ಕಪ್ಪು) ಇರುವ ಭ್ರಮರಗಳನ್ನು ತಮ್ಮ ಹೂಗಳ ಸುಗಂಧದಿಂದ ಯಾವಾಗಲೂ ಪಾವನ ಮಾಡುತ್ತಿರುವವು. ಇಂಥ ನಿನ್ನ ದಂಡೆಯ ವೃಕ್ಷಗಳು ನನ್ನೊಡನೆ ಸಖ್ಯತ್ವದಿಂದಿರಲಿ.

ಯಜಂತ್ಯೇಕೇ ದೇವಾನ್ಕಠಿಣತರಸೇವಾಂಸ್ತದಪರೇ ।
ವಿತಾನವ್ಯಾಸಕ್ತಾ ಯಮನಿಯಮರಕ್ತಾ ಕತಿಪಯೇ ॥
ಅಹಂ ತು ತ್ವನ್ನಾಮಸ್ಮರಣಕೃತಕಾಮಸ್ತ್ರಿಪಥಗೇ ।
ಜಗಜ್ಜಾಲಂ ಜಾನೇ ಜನನಿ ತೃಣಜಾಲೇನ ಸದೃಶಮ್ ॥ ೪೪ ॥

ಭೋ ಜನನಿ, ಏಕೇ ಕಠಿಣತರಸೇವಾನ್ ದೇವಾನ್ ಯಜಂತಿ. ತದಪರೇ ವಿತಾನವ್ಯಾಸಕ್ತಾಃ. ಕತಿಪಯೇ ಯಮ-ನಿಯಮರಕ್ತಾಃ. ಹೇ ತ್ರಿಪಥಗೇ ಅಹಂ ತು ತ್ವನ್ನಾಮಸ್ಮರಣಕೃತಕಾಮಃ (ಸನ್) ಜಗಜ್ಜಾಲಂ ತೃಣಜಾಲೇನ ಸದೃಶಂ ಮನ್ಯೇ.

ಎಲೌ ತಾಯಿಯೆ, ಕೆಲವರು ಕಷ್ಟಸಾಧ್ಯವಾದ ಸೇವೆಗಳಿಂದ ಪ್ರಸನ್ನರಾಗತಕ್ಕ ದೇವತೆಗಳನ್ನು ಪೂಜಿಸುತ್ತಾರೆ; ಬೇರೆ ಕೆಲವರು ಯಜ್ಞ-ಯಾಗಾದಿ ಕಾರ್ಯಗಳಲ್ಲಿ ಆಸಕ್ತರಾಗುತ್ತಾರೆ; ಮತ್ತೆ ಕೆಲವರು ಯಮ-ನಿಯಮಾದಿ ಯೋಗ ಸಾಧನೆಯಲ್ಲಿ ನಿಮಗ್ನರಾಗುತ್ತಾರೆ; ಎಲೌ ಭಾಗೀರಥಿಯೆ, ನಾನಾದರೋ ಕೇವಲ ನಿನ್ನ ನಾಮಸ್ಮರಣೆಯಿಂದಲೇ ಪೂರ್ಣ ಮನೋರಥನಾಗಿ, ಈ ಭವಬಂಧವನ್ನು ತೃಣಸಮಾನವೆಂದು ಭಾವಿಸುತ್ತೇನೆ.

ಅವಿಶ್ರಾಂತಂ ಜನ್ಮಾವಧಿ ಸುಕೃತಜನ್ಮಾರ್ಜನಕೃತಾಂ ।
ಸತಾಂ ಶ್ರೇಯಃ ಕರ್ತುಂ ಕತಿ ಚಕೃತಿನಃ ಸಂತಿ ವಿಬುಧಾಃ ॥
ನಿರಸ್ತಾಲಂಬಾನಾಮಕೃತಸುಕೃತಾನಾಂ ತು ಭವತೀಂ ।
ವಿನಾಽಮುಷ್ಮಿಲ್ಲೋಕೇ ನ ಪರಮವಲೋಕೇ ಹಿತಕರಮ್ ॥ ೪೫ ॥

(ಭೋ ಜನನಿ,) ಅವಿಶ್ರಾಂತಂ ಜನ್ಮಾವಧಿ ಸುಕೃತಜನ್ಮಾರ್ಜನಕೃತಾಂ ಸತಾಂ ಶ್ರೇಯಃ ಕರ್ತುಂ ಕೃತಿನಃ ಕತಿ ವಿಬುಧಾಃ ನ ಸಂತಿ? ಅಕೃತಸುಕೃತಾನಾಂ ನಿರಸ್ತಾಲಂಬಾನಾಂ (ಜನಾನಾಂ) ತು ಅಮುಷ್ಮಿನ್ ಲೋಕೇ ಹಿತಕರಂ ಭವತೀಂ ವಿನಾ ಪರಂ ನ ಅವಲೋಕೇ.

ಎಲೌ ತಾಯಿಯೆ, ನಿರಂತರ ಪುಣ್ಯ ಕರ್ಮಗಳಿಂದಲೇ ತಮ್ಮ ಯಾವತ್ತು ಆಯುಷ್ಯವನ್ನು ಕಳೆದ ಸಾಧುಗಳನ್ನು ಉದ್ಧರಿಸಲು ಕುಶಲರಾದ ದೇವತೆಗಳೆಷ್ಟು

ಮುಂದಿ ಇಲ್ಲ? ಅನೇಕರಿದ್ದಾರೆ. ಆದರೆ ಪುಣ್ಯ ಕರ್ಮಗಳನ್ನಾಚರಿಸದ ನಿರಾಧಾರ ಜನರ ಪರಲೋಕ ಹಿತವನ್ನು ಮಾಡಲು ಸಮರ್ಥರಾದವರಲ್ಲಿ ನಿನ್ನನ್ನುಳಿದು ಬೇರೆಯಾರನ್ನೂ ನಾನು ನೋಡಿಲ್ಲ- ನೀನೊಬ್ಬಳೇ ಈ ಕೆಲಸವನ್ನು ಮಾಡತಕ್ಕವಳಾಗಿರುವೆ.

ಪಯಃ ಪೀತ್ವಾ ಮಾತಸ್ತವ ಸಪದಿಯಾತಃ ಸಹಚರೈಃ ।
ವಿಮೂರ್ಖೈಃ ಸಂರಂತುಂ ಕ್ವಚಿದಪಿ ವಿಶ್ರಾಂತಿ ಮಗಮಮ್ ॥
ಇದಾನೀಮುತ್ಸಂಗೇ ಮೃದುಪವನಸಂಚಾರ- ಶಿಶಿರೇ |
ಚಿರಾದುನ್ನಿದ್ರಂ ಮಾಂ ಸದಯ ಹೃದಯೇ ಶಾಯಯಚಿರಮ್ ॥೪೬॥

ಭೋ ಮಾತಃ, ತವ ಪಯಃ ಪೀತ್ವಾ, ಸಪದಿ ವಿಮೂರ್ಖೈ: ಸಹಚರೈ: (ಸಹ) ಸಂರಂತುಂ (ಬಹುತ್ರ) ಯಾತಃ ಅಹಂ ಕ್ವಚಿತ್ ಅಪಿ ವಿಶ್ರಾಂತಿಂ ನ ಆಗಮಮ್ (ಅತಃ) ಭೋ ಸದಯಹೃದಯೇ, ಇದಾನೀಂ (ತ್ವಂ) ಮೃದುಪವನ ಸಂಚಾರಶಿಶಿರೇ ಉತ್ಸಂಗೇ ಚಿರಾತ್ ಉನ್ನಿದ್ರಂ ಮಾಂ ಚಿರಂ ಶಾಯಯ.

ಎಲೌ ಜನನಿಯೆ, ನಿನ್ನ ನೀರನ್ನು ಕುಡಿದು, ಕೂಡಲೇ ನಾನು ಅತಿಮೂರ್ಖರಾದ ಮಿತ್ರರೊಡನೆ ಆಟವಾಡುವದಕ್ಕೆ ಹೋಗಿ, ಅನೇಕ ಸ್ಥಳಗಳನ್ನು ಅಲೆದೆನು; ಆದರೆ ನನಗೆ ವಿಶ್ರಾಂತಿಯು ಎಲ್ಲಿಯೂ ದೊರೆಯಲಿಲ್ಲ. ಆದುದರಿಂದ ಸದಯಹೃದಯಳಾದಮಾತೆಯು, ಮಂದಮಾರುತನ ಸಂಚಾರದಿಂದ ಶೀತಲವಾದನಿನ್ನ ತೊಡೆಯಮೇಲೆ, ಬಹುಕಾಲದವರೆಗೆ ನಿದ್ರೆಯನ್ನು ಕಾಣದ ನನ್ನನ್ನು ಚಿರಕಾಲ ಮಲಗಿಸಿಕೊಳ್ಳು.

ಬಧಾನದ್ರಾಗೇವ ದ್ರಢಿಮರಮಣೀಯಂ ಪರಿಕರಂ।
ಕಿರೀಟೇ ಬಾಲೇಂದುಂ ನಿಯಮಯ ಪುನಃ ಪನ್ನಗಮುಣೈಃ॥
ನ ಕುರ್ಯಾಸ್ತ್ವಂ ಹೇಲಾಮಿತರ ಜನಸಾಧಾರಣತಯಾ ।
ಜಗನ್ನಾಥಸ್ಯಾಯಂ ಸುರಧುನಿ ಸಮುದ್ಧಾರಸಮಯಃ || ೪೭ ॥

ಹೇ ಸುರಧುನಿ, ಜಗನ್ನಾಥಸ್ಯ ಅಯಂ ಸಮುದ್ಧಾರಸಮಯಃ. (ಅತಃ) ತ್ವಂದ್ರಢಿಮರಮಣೀಯಂ ಪರಿಕರಂ ದ್ರಾಕ್ ಏವ ಬಧಾನ. ಪುನಃ ಕಿರೀಟೇ ಪನ್ನಗಮುಣೈ: ಬಾಲೇಂದುಂ ನಿಯಮಯ. ಇತರ ಜನಸಾಧಾರಣತಯಾ (ತ್ವಂ) ಹೇಲಾಂ ನ ಕುರ್ಯಾ:.

ಎಲೌ ಗಂಗೆಯೆ, ಇದು ಜಗನ್ನಾಥ ಪಂಡಿತನನ್ನು ಉದ್ಧಾರ ಮಾಡುವ ತಕ್ಕ ಸಮಯವಾಗಿದೆ; ಕಾರಣ ನೀನು ಅತಿ ಸುಂದರವಾದ ನಿನ್ನ ಟೊಂಕವನ್ನು ಕಟ್ಟು; (ಉದ್ಧಾರಮಾಡುವದಕ್ಕೆ ಸಿದ್ಧಳಾಗು) ಕಿರೀಟದಲ್ಲಿ ಸರ್ಪಗಳ ಸಮುದಾಯದಿಂದ ಬಾಲಚಂದ್ರನನ್ನು ಗಟ್ಟಿಯಾಗಿ ಇರಿಸು. ಸಾಮಾನ್ಯನಾದೊಬ್ಬ ಮನುಷ್ಯನಂತೆ ನೀನು ನನ್ನನ್ನು ತಿರಸ್ಕರಿಸಬೇಡ.

ಶರಚ್ಚಂದ್ರಶ್ವೇತಾಂ ಶಶಿಶಕಲಶುಭ್ರಾಲಮುಕುಟಾಂ
ಕರೈಃ ಕುಂಭಾಂಭೋಜೇ ವರಭಯನಿರಾಸೌ ಚ ದಧತೀಮ್ ॥
ಸುಧಾಧಾರಾಕಾರಾಭರಣವಸನಾಂ ಶುಭ್ರಮಕರ— ।
ಸ್ಥಿತಾಂ ಯೇ ತ್ವಾಂ ಧ್ಯಾಯಂತ್ಯುದಯತಿ ನತೇಷಾಂ ಪರಿಭವಃ ॥ ೪೮ ॥

(ಭೋ ಸುರಧುನಿ,) ಶರಚ್ಚಂದ್ರಶ್ವೇತಾಂ ಶಶಿಶಕಲಶುಭ್ರಾಲಮುಕುಟಾಂ ಕರೈಃ ಕುಂಭಾಭೋಜೇ ಚ ವರಭಯನಿರಾಸೌ ದಧತೀಮ್ ಸುಧಾಧಾರಾಕಾರಾಭರಣ ವಸನಾಂ ಶುಭ್ರಮಕರಸ್ಥಿತಾಂ ತ್ವಾಂ ಯೇ ಧ್ಯಾಯಂತಿ ತೇಷಾಂ ಪರಿಭವಃ ನ ಉದಯತಿ.

ಎಲೌ ಭಾಗೀರಥಿ, ಶರದೃತುವಿನಲ್ಲಿಯ ಚಂದ್ರನೋಪಾದಿಯಲ್ಲಿ ಶುಭ್ರವರ್ಣದವಳೂ, ಚಂದ್ರನ ಕೋರೆ ಮತ್ತು ಬಿಳಿ ಹಾವನ್ನು ಮುಕುಟದಲ್ಲಿ ಧರಿಸಿದವಳೂ, ನಾಲ್ಕು ಕೈಗಳಲ್ಲಿ ಕ್ರಮವಾಗಿ ಕುಂಭ, ಕಮಲ, ವರ, ಅಭಯಗಳನ್ನು ಹಿಡಿದು ಕೊಂಡವಳೂ, ಅಮೃತಧಾರೆಯಂತಿರುವ ಬಿಳೀ ಬಣ್ಣದ ವಸ್ತ್ರ-ಭೂಷಣಗಳನ್ನು ಧರಿಸಿದವಳೂ ಶುಭ್ರ-ಮಹಾ-ಮತ್ಸ್ಯದಮೇಲೆ ಕುಳಿತು ಕೊಂಡವಳೂ ಆದ ನಿನ್ನನ್ನು ಧ್ಯಾನಿಸಿದ ಮನುಷ್ಯನು ಅಪಜಯವನ್ನೆಂದೂ ಹೊಂದುವದಿಲ್ಲ.

ದರಸ್ಮಿತಸಮುಲ್ಲಸದ್ವದನಕಾಂತಿಪೂರಾಮೃತೈ ।
ಭವಜ್ವಲನಭರ್ಜಿತಾನನಿಶ ಮೂರ್ಜಯಂತೀ ನರಾನ್ ॥
ಚಿದೇಕಮಯಚಂದ್ರಿಕಾಚಯಚಮತ್ಕೃತಿಂ ತನ್ವತೀ ।
ತನೋತು ಮಮ ಶಂತನೋಃ ಸಪದಿ ಶಂತನೋರಂಗನಾ ॥ ೪೯ ॥

ದರಸ್ಮಿತಸಮುಲ್ಲಸದ್ವದನಕಾಂತಿಪೂರಾಮೃತೈಃ ಭವಜ್ವಲನಭರ್ಜಿತಾನ್ ನರಾನ್ ಅನಿಶಂ ಊರ್ಜಯಂತೀ, (ಚ) ಚಿದೇಕಮಯಚಂದ್ರಿಕಾಚಯಚಮತ್ಕೃತಿಂ ತನ್ವತೀ ಶಂತನೋಃ ಅಂಗನಾ, ಮಮ ತನೋಃ ಶಂ ಸಪದಿ ತನೋತು.

ಮೃದುಹಾಸ್ಯದಿಂದ ಶೋಭಿಸುತ್ತಿರುವ ಮುಖದ ಕಾಂತಿಯೆಂಬ ಅಮೃತದಿಂದ ಸಂಸಾರವೆಂಬ ಬೆಂಕಿಯಿಂದ ಸುಟ್ಟು ಹೋಗುತ್ತಿರುವ ಮನುಷ್ಯನ್ನು ಸದೈವ ಶಾಂತಗೊಳಿಸುತ್ತಿರುವವಳೂ ಚೈತನ್ಯ ರೂಪವಾದ ಚಂದ್ರಕಾಂತಿಯ ಚಮತ್ಕಾರವನ್ನು ಪಸರಿಸುವವಳೂ ಆದ ಶಂತನುರಾಜನ ಹೆಂಡತಿಯಾದ ಶ್ರೀಗಂಗೆಯು ನನ್ನ ಶರೀರಸುಖವನ್ನು ತೀವ್ರವೇ ವರ್ಧಿಸಲಿ.

ಮಂತ್ರೈರ್ಮೀಲಿತಮೌಷಧೈರ್ಮುಕುಲಿತಂ ತ್ರಸ್ತಂ ಸುರಾಣಾಂ ಗಣೈಃ ।
ಸ್ರಸ್ತಂ ಸಾಂದ್ರಸುಧಾರಸೈರ್ವಿದಲಿತಂ ಗಾರುತ್ಮತೈರ್ಗ್ರಾವಭಿಃ ॥

ವೀಚಿಕ್ಷಾಲಿತಕಾಲಿಯಾಹಿತಪದೇ ಸ್ವರ್ಲೋಕಕಲ್ಲೋಲಿನಿ ।
ತ್ವಂ ತಾಪಂ ನಿರಯಾಧುನಾ ಮಮ ಭವಜ್ವಾಲಾವಲೀಢಾತ್ಮನಃ ॥೫೦॥

ವಿಚಿಕ್ಷಾಲಿತಕಾಲಿಯಾಹಿತಪದೇ ಸ್ವರ್ಲೋಕ ಕಲ್ಲೋಲಿನಿ, ತ್ವಂ ಅಧುನಾ ಭವವ್ಯಾಲಾವಲೀಢಾತ್ಮನಃ ಮಮ ತಾಪಂ ನಿರಯ. (ಯತ್) ಮಂತ್ರೈಃ ಮೀಲಿತಂ ಔಷಧೈಃ ಮುಕುಲಿತಂ. ಸುರಾಣಾಂ ಗಣೈಃ ತಸ್ತಂ. ಸಾಂದ್ರಸುಧಾರಸೈಃ ಸ್ರಸ್ತಂ ಗಾರುತ್ಮತೈಃ ಗ್ರಾವಭಿಃ ವಿದಲಿತಮ್.

ಲಹರಿಗಳಿಂದ ಶ್ರೀಕೃಷ್ಣನ ಪದಕಮಲವನ್ನು ತೊಳೆದ ಎಲೌ ದೇವಗಂಗೆಯೆ, ನೀನು ಸಂಸಾರವೆಂಬ ಸರ್ಪದಿಂದ ಗಾಯಹೊಂದಿದ ನನ್ನ ತಾಪವನ್ನು ದೂರ ಮಾಡು. ಯಾಕಂದರೆ ನನ್ನ ಈ ದುಃಖವನ್ನು ದೂರ ಮಾಡಲಾರದವುಗಳಾಗಿ ಗಾಯತ್ರ್ಯಾದಿ ಮಂತ್ರಗಳು ತಮ್ಮ ಶಕ್ತಿಯು ಸಂಕುಚಿತವಾಗಿದ್ದೆಂದು ಒಪ್ಪಿಕೊಂಡವು; ಔಷಧಗಳು ತಮ್ಮಲ್ಲಿ ಇದನ್ನು ಕಳೆಯುವ ಸಾಮರ್ಥ್ಯವಿಲ್ಲೆಂದು ಹೇಳಿಕೊಂಡವು; ದೇವತೆಗಳು ನನ್ನ ಈ ಸಂಕಟವನ್ನು ನೋಡಿ ಭಯ ಹೊಂದಿದರು; ದಟ್ಟವಾದ ಅಮೃತರಸವು ಈ ವಿಷಯದಲ್ಲಿ ನಿರುಪಯುಕ್ತವಾದದ್ದಾಯಿತು; ಗರುಡನನ್ನು ದೇವರನ್ನಾಗಿ ಮಾಡಿಕೊಂಡ ವಿಷಹಾರೀ ಶಿಲೆಗಳೂ ಕೂಡ ನನ್ನ ರೋಗವನ್ನು ಹೋಗಲಾಡಿಸದವುಗಳಾಗಿ ನಾಚಿಕೊಂಡು ಚೂರುಚೂರಾಗಿ ಹೋದವು. ಆದುದರಿಂದ ಎಲ್ಲ ಉಪಾಯುಗಳೂ ಮೀರಿನಿಂತ ನನ್ನ ಈ ತಾಪವನ್ನು ನಿನ್ನ ಹೊರತು ಕಳೆಯುವವರಾರೂ ಇಲ್ಲ

ದ್ಯೂತೇನಾಗೇಂದ್ರ ಕೃತ್ತಿಪ್ರಮಥಗಣಮಣಿಶ್ರೇಣಿನಂದೀಂದು ಮುಖ್ಯಂ ।
ಸರ್ವಸ್ವಂ ಹಾರಯಿತ್ವಾ ಸ್ವಮಥ ಪುರಭಿದಿ ದ್ರಾಕ್ಪಣೀ ಕರ್ತುಕಾಮೇ ॥
ಸಾಕೂತಂ ಹೈಮವತ್ಯಾ ಮೃದುಲಹಸಿತಯಾ ವೀಕ್ಷಿತಾಯಾಸ್ತವಾಂಬ ।
ವ್ಯಾಲೋಲೋಲ್ಲಾಸಿವಲ್ಗಲ್ಲಹರಿ ನಟಘಟೀ ತಾಂಡವಂ ನಃ ಪುನಾತು ॥೫೧॥

ದ್ಯೂತೇ ನಾಗೇಂದ್ರಕೃತ್ತಿ ಪ್ರಮಥಗಣಮಣಿಶ್ರೇಣಿ ನಂದೀಂದುಮುಖ್ಯಂ ಸರ್ವಸ್ವಂ ಹಾರಯಿತ್ವಾ ಅಥ ಪುರಭಿದಿ ಸ್ವಂ ದ್ರಾಕ್ ಪಣೀಕರ್ತುಕಾಮೇ (ಸತಿ), ಮೃದುಲಹಸಿತಯಾ ಹೈಮವತ್ಯಾ ಸಾಕೂತಂ ವೀಕ್ಷಿತಾಯಾಃ ತವ ವ್ಯಾಲೋಲೋಲ್ಲಾಸಿವಲ್ಗಲ್ಲಹರಿ ನಟಘಟೀ ತಾಂಡವಂ ನಃ ಪುನಾತು.

ಎಲೌ ಮಾತೆಯೆ, ಪಾರ್ವತಿಯು ಮಹಾದೇವನೊಡನೆ ಜೂಜಾಡಿ, ಅವನಿಂದ ಸರ್ಪ, ಗಜ, ಚರ್ಮ, ಪ್ರಮಥಗಣ, ರುದ್ರಾಕ್ಷಿ, ನಂದಿ, ಚಂದ್ರಕಲೆ ಮೊದಲಾದವುಗಳನ್ನೆಲ್ಲ ಗೆದ್ದುಕೊಂಡಳು. ಆಗಮಹಾದೇವನು ತನ್ನನ್ನೇ ಪಣವಾಗಿ ಹಚ್ಚಿಕೊಳ್ಳಲು ಸಿದ್ಧ

ನಾದನು; ಈ ಸಮಯದಲ್ಲಿ ಮಂದಹಾಸಯುಕ್ತಳಾದ ಪಾರ್ವತಿಯು ನಿನ್ನನ್ನು ಜೂಜಿನಲ್ಲಿ ಗೆದ್ದುಕೊಳ್ಳಬೇಕೆಂದು ಯೋಚಿಸಿ, ನಿನ್ನ ಕಡೆಗೆ ನೋಡಿದಳು. ಈ ವೇಳೆಯಲ್ಲುಂಟಾದ ನಿನ್ನ ಚಂಚಲವೂ, ಮೇಲಕ್ಕೆಹಾರುತ್ತಿರುವದೂ, ಒಂದರಲ್ಲೊಂದು ಕೂಡುತ್ತಿರುವದೂ ಆದ ಲಹರಿಗಳ ಸಮುದಾಯದ, ತಲೆಯಮೇಲೆ ಕೊಡವನ್ನಿಟ್ಟುಕೊಂಡು ಕುಣಿಯುತ್ತಲಿರುವ ನಟಿಯ ನಟನೆಯೋಪಾದಿಯಲ್ಲಿರುವ, ತಾಂಡವನೃತ್ಯವು ನನ್ನನ್ನು ಪವಿತ್ರರನ್ನಾಗಿ ಮಾಡಲಿ.

ವಿಭೂಷಿತಾನಂಗರಿಪೂತ್ತಮಾಂಗಾ |
ಸದ್ಯಃಕೃತಾನೇಕ ಜನಾರ್ತಿ ಭಂಗಾ ||
ಮನೋಹರೋತ್ತುಂಗ ಚಲತ್ತರಂಗಾ |
ಗಂಗಾಮಮಾಂಗಾನ್ಯಮಲೀ ಕರೋತು || ೫೨ ||

ವಿಭೂಷಿತಾನಂಗರಿಪೂತ್ತಮಾಂಗಾ, ಸದ್ಯಃಕೃತಾನೇಕ ಜನಾರ್ತಿ ಭಂಗಾ, ಮನೋಹರೋತ್ತುಂಗ ಚಲತ್ತರಂಗಾ ಗಂಗಾ ಮಮ ಅಂಗಾನಿ ಅಮಲೀಕರೋತು.

ತನ್ನ ಇರುವಿಕೆಯಿಂದ ಮಹಾದೇವನ ಮಸ್ತಕವನ್ನು ಸುಶೋಭಿತವನ್ನಾಗಿ ಮಾಡಿದ, ಅನೇಕಜನರ ದುಃಖವನ್ನು ನಾಶಮಾಡಿದ, ಸುಂದರವೂ, ಎತ್ತರವೂ, ಚಂಚಲವೂ ಆದ ತರಂಗಗಳುಳ್ಳ ಗಂಗೆಯು ನನ್ನ ಯಾವತ್ತು ಅವಯವಗಳನ್ನು ಶುದ್ಧಗೊಳಿಸಲಿ.

ಇಮಾಂ ಪಿಯೂಷಲಹರೀಂ ಜಗನ್ನಾಥೇನ ನಿರ್ಮಿತಾಮ್ ||
ಯಃ ಪಠೇತ್ತಸ್ಯ ಸರ್ವತ್ರ ಜಾಯಂತೇ ಸುಖ ಸಂಪದಃ || ೫೩ ||

ಜಗನ್ನಾಥೇನ ನಿರ್ಮಿತಾಂ ಇಮಾಂ ಪಿಯೂಷಲಹರೀಂ ಯಃ ಪಠೇತ್, ತಸ್ಯ ಸರ್ವತ್ರ ಸುಖಸಂಪದಃ ಜಾಯಂತೇ.

**ಜಗನ್ನಾಥ ಪಂಡಿತ**ನಿಂದ ರಚಿತವಾದ ಈ **ಗಂಗಾಲಹರಿ**ಯನ್ನು ಪಠಿಸಿದ ಮನುಷ್ಯನಿಗೆ ಇಹಪರಗಳೆರಡರಲ್ಲಿಯೂ ಸುಖ-ಸಂಪತ್ತಿಗಳು ದೊರೆಯುವವು.



## ಕಠಿಣಶಬ್ದಗಳ ಅರ್ಥ.

ಅಕೃತ = ಪಾಪ
ಅಗಾತ್ (ಗಾ ಧಾತು ಪರ) = ಹೋದನು
ಅತನು (ನ+ತನು) = ದೊಡ್ಡ
ಅತ್ರಭವತಿ = ಪೂಜ್ಯಳೆ
ಅಧಿ (ನ+ಧಿ) ಬುದ್ಧಿಗೇಡಿ
ಅನನ್ಯ = ಸ್ತುತ್ಯ
ಅನಿಶಂ = ಯಾವಾಗಲೂ
ಅಪಾಸ್ಯ = ತ್ಯಾಜ್ಯ
ಅಮರ್ಷ = ಸಿಟ್ಟು
ಅಮುಷ್ಮಿನ್ = ಈ
ಅಲ = ಹಾವು
ಅಲಸ್ = ಸಾಕು
ಅಲಘು (ನ+ಲಘು) = ದೊಡ್ಡ
ಅವಲೀಢ (ಲಿಹ್ ಧಾತು ನೆಕ್ಕು) ಕಡಿಸಿಕೊಂಡ
ಅವಸಿತ = ತಿಳಿದ
ಅವಜ್ಞಾ = ತಿರಸ್ಕಾರ
ಅಶಿವ (ನ+ಶಿವ) = ಪಾಪ
ಆಧಾನ (ಧಾ ಧಾತು ಇಡು, ಹಿಡಿ.) ಸಂಚಿತಸ್ಥಳ
ಆರಾತ್ = ಬೇಗನೆ
ಆರ್ತಿ = ಪೀಡೆ
ಆಸಾದ್ಯ = ಹೊಂದಿ
ಈಹಾ = ಇಚ್ಛೆ
ಉತ್ಸಂಗ = ತೊಡೆ
ಉದಂಚನ್ = ಉದಯಿಸುವ, ಮೇಲಕ್ಕೇರುವ
ಉಲ್ಲಸ್ಯ = ಪ್ರಸಾರಹೊಂದಿ
ಏನಸ್ = ಪಾಪ
ಏನಸ್ಕ = ಪಾಪಿ
ಕತಿ = ಕೆಲವರು
ಕಪರ್ದ = ಜಡೆ
ಕಪಾಲಿ = ಶಿವ
ಕಲುಷ = ಪಾಪ
ಕಲ್ಲೋಲಿನೀ = ನದಿ
ಕಾಲಿಯಾ+ಅಹಿತ = ಕೃಷ್ಣ
ಕಿಯತಾಂ = ಎಷ್ಟೋ
ಕಿಯಂತ: = ಕೆಲವರು
ಕೌಂಕುಮ = ಕುಂಕುಮದ
ಕೃತ್ತಿ = ಆನೆಯ ತೊಗಲು
ಕೃಪಾತಃ = ಕೃಪೆಯಿಂದ
ಕೃತ್ಸ್ನ = ಸಂಪೂರ್ಣವಾಗಿ
ಕ್ರೋಡ = ಮಧ್ಯಭಾಗ
ಗತಿದ = ಗತಿಯನ್ನು ಕೊಡುವ
ಗದ = ರೋಗ
ಗಾರುತ್ಮತೇ = ಗರುಡನಸಂಬಂಧದ
ಗ್ರಾವ = ಕಲ್ಲು.
ಗಿರಿಭೂ = ಪಾರ್ವತಿ
ಘ್ನಂತ (ಹನ್ ಧಾತುಕೊಲ್ಲು) ಕೊಂದ
ಘೂರ್ಣಿತ = ಭ್ರಮಿತ, ತಿರುಗುವ
ಚಂಚತ್ = ಕಂಪಿಸುವ
ಛಟಾ = ಪರಂಪಿರೆ
ಛುರಣ = ಲೇಪನ, ತೊಡೆದ ಪದಾರ್ಥ
ಜಂಬಾಲ = ಶೈವಾಲ
ಜಟಿಲ = ನಿಬಡವಾದ
ಜಡಧಿ (ಜಡ+ಧಿ) = ದಡ್ಡ
ಜನಪದ = ದೇಶ

ಜನಿ = ಹುಟ್ಟು
ಜುಷ = ಸೇವಿಸುವ
ಜೂಟ = ಗುಂಪು
ಝಟಿತಿ = ಕೂಡಲೆ
ತಂದ್ರಾ = ಆಲಸ್ಯ
ತ್ರಪ = ನಾಚು
ತ್ವದೃತೇ = ನಿನ್ನ ಹೊರತು
ತಾಂಡವ = ಕುಣಿತ
ತಿಂದುಕ = ತುಮರಿ
ತಿರೋಧಾನ = ಕಣ್ಣಿಗೆ ಕಾಣದ
ತ್ರಿಪಥಗೇ = ಗಂಗಾನದಿಯು
ತ್ರಿದಶ + ತಟಿನಿ = ಗಂಗಾನದಿಯು
ತುಲಾಲೇಶ - ಸಾಮ್ಯಂಶ ಅಲ್ಪ ಸಾಮ್ಯ
ತೋಯ = ನೀರು
ದಲನ = ನಾಶ
ದೃಢಿಮಾ = ಅತಿಶಯ ದೃಢ
ದ್ರಾಗ್ = ಬೇಗನೆ
ದಿವ್ಯ = ಸ್ವರ್ಗೀಯ
ದಿವಿಷತ್ = ದೇವತೆ
ದುರಿತ = ಪಾಪ
ದ್ಯುತಲ = ಸ್ವರ್ಗ
ದ್ರುತಂ = ಬೇಗನೆ
ದ್ರುಮ = ಗಿಡ
ನ್ಯಕ್ಕಾರ = ಧಿಕ್ಕಾರ
ನಾಕ = ಸ್ವರ್ಗ
ನಾಗೇಂದ್ರ = ಶೇಷ
ನಿಗದ (ಗದ್ ಧಾತು ಮಾತಾಡು) ಸ್ತುತಿಸು
ನಿಧಾನ = ಸ್ಥಾನ
ನಿರಯ = ನರಕ

ನಿರಯ (ಅಯ್ ಧಾತು) ನಾಶಮಾಡು
ನಿರವಧಿ = ಬಹಳ
ನಿರಸ್ತ = ಇಲ್ಲದ, ನಾಶವಾದ
ನಿವಹ = ಸಮೂಹ
ನಿರ್ವಾಸಿತ = ದೂರೀಕೃತ, ಹೊರಗೆ ಹಾಕಿದ
ನಿಸ್ತಾರಣ = ನಾಶ
ನಿಹಿತ = ಇರಿಸಿದ
ಪಟಲೀ = ಸಮೂಹ
ಪದ್ಮಾ = ಲಕ್ಷ್ಮಿ
ಪರಿಕರ = ಟೊಂಕ
ಪರಿತಃ = ಸುತ್ತಲು
ಪರಿತ್ರಾಣ = ರಕ್ಷಣೆ
ಪರಿಷತ್ = ಸಮೂಹ
ಪರೇತಾನ್ = ಮರಣ ಹೊಂದಿದ
ಪ್ರಗೀತ = ಗಾಯನ
ಪ್ರಪದ = ಶರಣ ಹೋಗು
ಪ್ರವಿತ = ವಿಸ್ತೃತ
ಪಾಥ = ನೀರು
ಪಾಂಸು = ಹುಡಿ
ಪ್ರಾಜ್ಯಂ = ದೊಡ್ಡ
ಪ್ರಾಣಪ್ರಾಂತ = ಅಂತ್ಯಕಾಲ
ಪಿಶುನ = ದುಷ್ಟ
ಪುರಭಿದ = ಶಿವ
ಪುಂಸಾ = ಮನುಷ್ಯ
ಪ್ರೇಖಂತ್ = ಚಲಿಸುವ
ಪೈಶೂನ್ಯ = ಚಾಡಿ
ಪ್ರೋತ್ತುಂಗ = ಎತ್ತರವಾದ
ಭರ್ಜಿತ = ಸುಟ್ಟ
ಬಧಾನ (ಬಧ್ ಧಾತು) ಕಟ್ಟು

ಭಿಷಜ = ವೈದ್ಯ
ಭೇಷಜ = ಔಷಧ
ಮಂತು = ಅಪರಾಧ
ಮಾರ್ತಾಂಡ = ಸೂರ್ಯ
ಮೃಗಮದ = ಕಸ್ತೂರಿ
ಮೃತ್ಸ್ನ = ಮಣ್ಣು
ಮೈರೇಯ = ಮದ್ಯ
ಲುಲಿತ = ಅಲ್ಲಾಡಿಸ್ಪಟ್ಟ
ಲೋಕದ್ವಯಭರ = ಇಹಪರಗಳಭಾರ
ಲೋಕಾರ್ಥ ಘಟಕ = ಪರೋಪಕಾರಿ
ವ್ಯತಿಕರ = ಸಹವಾಸ
ವಾನೀರ = ಬಿದಿರುಗಿಡ
ವ್ರಾತ್ಯ = ಕಾಡು
ವ್ಯಾಲ = ಹಾವು
ವ್ಯಾಲೋಲ = ಚಂಚಲ
ವಿಕಚ = ಅರಳಿದ
ವಿಗಲಿತ = ಸೋರಿದ, ನಾಶವಾದ
ವಿತರ (ತೃಧಾತು) ಕೊಡು
ವಿತಾನ = ಯಜ್ಞಕರ್ಮ
ವಿದಲ = ಸೀಳು
ವಿದಧ್ಯಾ: (ಧಾ ಧಾತು) = ವಿಧಿಸು
ವಿಲೋಲ = ವಿಶೇಷ ಚಂಚಲ
ವಿಸರತ್ = ಪ್ರಸಾರವಾಗುವ
ವೀಚಿ = ತೆರೆ
ವೈವಸ್ವತ = ಯಮ
ಶಕಲ = ಚೂರು

ಶಮನ = ನಾಶ
ಶಶ್ವತ = ಚಿರಕಾಲ
ಶ್ಲಥ = ಸಡಿಲು ಮಾಡು
ಶ್ವವೃತ್ತಿ = ನಾಯಿಯ ವರ್ತನ
ಶ್ರಾವಶ್ರಾವಂ = ಕೇಳಿಕೇಳಿ
ಶಿಶಿರ = ತಂಪು
ಶೇಶಾಂ (ಶಿಧಾತು ಮಲಗು) = ಮಲಗಲಿ
ಸಕೃತ್ = ಒಮ್ಮೆ
ಸಂಕ್ಷೋಭ = ಭಯ
ಸಪದಿ = ಕೂಡಲೆ
ಸಾಕೂತ (ಸ + ಆಕೂತ) = ಇಂಗಿತ ದೊಡನೆ
ಸ್ವಾಂತ = ಅಂತ:ಕರಣ
ಸೀಮಂತ = ಬೈತಲ
ಸುಧಾತ: = ಅಮೃತಕ್ಕಿಂತಲೂ
ಸುಮನಸ್ = ಹೂವು
ಸುರತಟಿನಿ = ಗಂಗಾನದಿ
ಸುರಧುನಿ = ಗಂಗಾನದಿ
ಸುರಪುರ = ದೇವತೆಗಳ ಪಟ್ಟಣ (ಅಮರಾವತಿ)
ಸೌರಭ್ಯ = ಸುಗಂಧ, ಪರಿಮಳ
ಹೇಲಾ = ತಿರಸ್ಕಾರ
ಹೇರಂಬ = ಪಾರ್ವತಿ
ಹೈಮವತಿ ಪಾರ್ವತಿ
ಕ್ಷರತ್ = ಬಿದ್ದ
ಕ್ಷಲ (ಧಾತು) = ತೊಳೆ

---